

# ದಾಸಾಂಜಲಿ

ಬನ್ನಂಜೆ ಗೋವಿಂದಾಚಾರ್ಯ

ಆನಂದತೀರ್ಥ ಪ್ರತಿಷ್ಠಾನ ಗ್ರಂಥಮಾಲಾ

ಆನಂದತೀರ್ಥ ಪ್ರತಿಷ್ಠಾನ ಗ್ರಂಥಮಾಲಾ
( ಕನ್ನಡ ಪ್ರಕಟಣೆಗಳು ತೃತೀಯ ಪುಷ್ಪ )

# ದಾಸಾಂಜಲಿ

ಬನ್ನಂಜೆ ಗೋವಿಂದಾಚಾರ್ಯ

ಆನಂದತೀರ್ಥ ಪ್ರತಿಷ್ಠಾನ
ಪೂರ್ಣಪ್ರಜ್ಞನಗರ, ಬೆಂಗಳೂರು–28
1982

ಪ್ರಥಮ ಮುದ್ರಣ ಅಕ್ಟೋಬರ್ ೧೯೮೨
ಮುದ್ರಿತ ಪ್ರತಿಗಳು 2,000

ಪ್ರಕಾಶಕರು :

**ಆನಂದತೀರ್ಥ ಪ್ರತಿಷ್ಠಾನ**

(ಅಖಿಲ ಭಾರತ ಮಾಧ್ವ ಮಹಾ ಮಂಡಲದ ಅಂಗ ಸಂಸ್ಥೆ)

ಶ್ರೀ ಪೇಜಾವರ ಮಠಾಧೀಶರಾದ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದರ ೫೦ ವರ್ಧಂತಿ ನಿಧಿಯಿಂದ ವೇದಾಂತ, ಧರ್ಮ, ತತ್ವಜ್ಞಾನಗಳ ಪ್ರಸಾರಕ್ಕಾಗಿ ಸ್ಥಾಪಿತವಾದ ಸಂಸ್ಥೆ

**ಬೆಲೆ : ರೂ: 1-50**

ಬೃಂದಾವನ ಪ್ರಿಂಟರ್ಸ್, ಲಾಲ್‌ಬಾಗ್ ರೋಡ್, ಬೆಂಗಳೂರು–560 004

# ದಾಸಾಂಜಲಿಯ ಕುರಿತು

ಪೇಜಾವರ ಶ್ರೀ ವಿಶ್ವೇಶತೀರ್ಥರ 50 ನೇ ಹುಟ್ಟು ಹಬ್ಬದ ಸವಿ ನೆನಪಿನ ವಿಶೇಷ ಪ್ರಕಟಣೆಗಳಲ್ಲಿ ಒಂದು ಕಿರು ಹೊತ್ತಿಗೆ "ದಾಸಾಂಜಲಿ". ಶ್ರೀಗಳವರ ವರ್ಧಂತ್ಯುತ್ಸವದ ಕೇಂದ್ರ ಸಮಿತಿ ಪ್ರಕಾಶಿಸಿದ ಈ ಕಿರು ಹೊತ್ತಿಗೆಯನ್ನು ಬಹುಜನರ ಅಪೇಕ್ಷೆಯ ಮೇರೆಗೆ ಆನಂದತೀರ್ಥ ಪ್ರತಿಷ್ಠಾನವು ಮರು ಮುದ್ರಿಸಲು ಸಂಕಲ್ಪಿಸಿತು.

ಪುರಂದರ ದಾಸರು ದಾಸಪರಂಪರೆಯಲ್ಲಿ ಅಗ್ರಗಣ್ಯರು. ಅವರ ಭಕ್ತಿಪೂರ್ಣವಾದ ತತ್ವನಿಷ್ಠಜೀವನ ಚಿತ್ರಣವೇ ಈ ಕಿರು ಹೊತ್ತಿಗೆ.

ವಿದ್ಯಾವಾಚಸ್ಪತಿ ಬನ್ನಂಜೆ ಗೋವಿಂದಾಚಾರ್ಯರು ಭಾರತೀಯ ಪರಂಪರೆ, ತತ್ವಶಾಸ್ತ್ರಗಳನ್ನು ಮನಮುಟ್ಟುವಂತೆ ಸೋದಾಹರಣವಾಗಿ ನಿರೂಪಿಸುವುದರಲ್ಲಿ ಅನುಪಮ ಸಿದ್ಧಿ ಪಡೆದವರು. ಅವರು ಈ ಹೊತ್ತಿಗೆಯಲ್ಲಿ ಪುರಂದರರ ಬದುಕನ್ನು ವಿಚಾರ ದೀಪಿಕೆಗೆ ಒಡ್ಡಿ ಇಂದಿಗೂ ಎಂದಿಗೂ ಉಪಯುಕ್ತವಾಗಬಲ್ಲ ಮೌಲ್ಯಗಳ ಶೋಧನೆ ನಡೆಸಿದ್ದಾರೆ.

10-10-1982 ಪ್ರಕಾಶಕರು

# ದಾಸಾಂಜಲಿ

## ಶ್ರೀನಿವಾಸ ನಾಯಕ – ಪುರಂದರದಾಸ

ಭಗವಂತ ನುಡಿದಿದ್ದಾನೆ: ಯಸ್ಯಾನುಗ್ರಹಮಿಚ್ಛಾಮಿ ತಸ್ಯ ವಿತ್ತಂ ಹರಾಮ್ಯಹಮ್, "ನಾನು ಯಾರನ್ನಾದರೂ ಉದ್ಧರಿಸಲು ಒಯಸಿದಾಗ ಮೊದಲು ಆತನ ಸಂಪತ್ತನ್ನು ಕಸಿದುಕೊಳ್ಳುತ್ತೇನೆ" — ಎಂದು ಈ ಮಾತಿಗೆ ಪುರಂದರದಾಸರಿಗಿಂತ ಒಳ್ಳೆಯ ಉದಾಹರಣೆ ಬೇರೆ ಬೇಕೆ? ಕೋಟೀಶ್ವರನಾಗಿದ್ದ ಶ್ರೀನಿವಾಸ ನಾಯಕ*ನನ್ನು ಇತಿಹಾಸದ ಪುಟಗಳು ಗುರುತಿಸಲೇ ಇಲ್ಲ ಆದರೆ ಜೋಳಿಗೆ ಹಿಡಿದು ತಿರುಪೆಗೆ ಹೊರಟ ಪುರಂದರ ದಾಸರನ್ನು ಇತಿಹಾಸ ಗುರುತಿಸಿತು.

ದುಡ್ಡಿದ್ದವರನ್ನು ಜನ ಗೌರವಿಸುತ್ತಾರೆ. ನಿಜ ಆದರೆ ದುಡ್ಡು ಎಷ್ಟು ಚಪಲವೋ ಆದಕ್ಕಿಂತ ಹೆಚ್ಚು ಚಪಲ ಈ ದುಡ್ಡಿನಿಂದ ಪಡೆದ ಗೌರವ ಇವತ್ತು ಇದ್ದೀತು. ನಾಳೆ ಇರದಿದ್ದೀತು. ಏನಿದ್ದರೂ ದುಡ್ಡಿಗೂ ದೇಹಕ್ಕೂ ಸಂಬಂಧ ಒಂದು ದಿನ ಈ ಪಂಜರದಿಂದ ಗಿಳಿ ಹಾರಿ ಹೋಗಬೇಕು. ಮುಂದೆ? ಆದಕ್ಕೇ ಈ ದಾರಿ ಬೇಡ ಎಂದರು ಹಿರಿಯರು "ತ್ಯಾಗೇನೈಕೇ ಅಮೃತತ್ವ ಮಾನಶುಃ".

ಯಾವುದಾದರೂ ಒಂದನ್ನು ತ್ಯಾಗ ಮಾಡದೆ ಬದುಕುವುದು ಸಾಧ್ಯವಿಲ್ಲ. ದುಡ್ಡು ಬೇಕೆಂದರೆ ಭಗವಂತನ ಕರುಣೆಯ ಹಿರಿಮೆಯನ್ನು ತ್ಯಾಗ ಮಾಡಬೇಕು ಭಗವಂತನ ಕರುಣೆ ಬೇಕೆಂದರೆ ದುಡ್ಡನ್ನು ತ್ಯಾಗ ಮಾಡಬೇಕು "ಆಕಿಂಚನ್ಯಂ ಧನಂ ವಿದುಷಾಂ" ಸಂಪತ್ತು ಎಂದರೆ ಮದ ತ್ಯಾಗ ಎಂದರೆ ದಮ. ಸಂಪತ್ತು ಎಂದರೆ ಮಾನ ತ್ಯಾಗ ಎಂದರೆ ಮೌನ.

---

* ಕೆಲವರ ಅಭಿಮತದಂತೆ ಪುರಂದರದಾಸರ ಪೂರ್ವನಾಮ ಕೃಷ್ಣಪ್ಪನಾಯಕ'

ಭೋಗಿಗಳಿಗೆ ಮೊದಲನೆಯದು ಆಕರ್ಷಕವಾಗಿರುತ್ತದೆ. ದೇವರನ್ನು ಕೂಡ ದುಡ್ಡಿನಿಂದಲೆ ಕೊಂಡುಕೊಳ್ಳಬಹುದು ಎನ್ನುವ ಭ್ರಮೆ ಅವರ ಆಕರ್ಷಣೆಗೆ ಕಾರಣ. ಆದರೆ ದೇವರು ಮತ್ತು ದುಡ್ಡು ಎರಡನ್ನೂ ಒಲಿಸಿ ಕೊಳ್ಳುವುದು ಕನಸಿನ ಮಾತು. 'ದೇವರೆ, ನನಗೆ ದುಡ್ಡು ಕೊಡು' ಎಂದು ಬೇಡಿದ ಭಕ್ತನಿಗೆ ಭಗವಂತ ದುಡ್ಡನಿತ್ತು ತಾನು ದೂರ ಸರಿಯುತ್ತಾನೆ. 'ನನಗೆ ನೀನಲ್ಲದೆ ಇನ್ನೇನೂ ಬೇಡ' ಎಂದವನಿಗೆ ಮಾತ್ರ ಆತ ಎಟಕುತ್ತಾನೆ. ಆದರಿಂದಲೆ ವಿವೇಕಿಗಳು ಎರಡನೆಯದನ್ನು ಆಯ್ದುಕೊಳ್ಳುತ್ತಾರೆ. ತ್ಯಾಗದ ಕೀರ್ತಿ ಜೀವದ ಒಡನಾಡಿ ದೇಹ ಅಳಿದರೂ ಅದು ಶಾಶ್ವತವಾಗಿ ವಿಶ್ವದ ಗಾಳಿಯಲ್ಲಿ ತೇಲಿಕೊಂಡಿರುತ್ತದೆ.

ಪುರಂದರದಾಸರು ಎರಡನೆಯ ಸಾಲಿಗೆ ಸೇರಿದವರು. ಅವರು ಶ್ರೀಮಂತರ ಮುಂದೆ, ರಾಜಾಧಿರಾಜರ ಮುಂದೆ, ಅಳುಕದೆ ನಿಂತು ತಲೆ ಎತ್ತಿ ನುಡಿದರು: "ನಿಮಗೆ ಲಕ್ಷ್ಮಿ ಒಲಿದರೆ ನಮಗೆ ಲಕ್ಷ್ಮೀರಮಣ ಒಲಿದಿದ್ದಾನೆ." ಅವರ ಸವಾಲನ್ನು ಎದುರಿಸುವ ಆದಟು ಯಾರಿಗುಂಟು?

ನಿಮ್ಮ ಭಾಗ್ಯ ದೊಡ್ಡದೋ ನಮ್ಮ ಭಾಗ್ಯ ದೊಡ್ಡದೋ
ಸಮ್ಮತಿಯಿಂದ ನೀವು ನಾವು ಸಾಟಿ ಮಾಡಿ ನೋಡುವ
ಹೇಮ ಹೊನ್ನು ಮಣ್ಣುಗಳಿಗೆ ಹೇರಳ ಭಯಗಳುಂಟು
ರಾಮನಾಮ ದ್ರವ್ಯಕ್ಕಿನ್ನು ಯಾರ ಭಯವಿಲ್ಲವಯ್ಯ
ನಿಮ್ಮ ಭಾಗ್ಯ ಲಕ್ಷ್ಮೀದೇವಿ ನಮ್ಮ ಭಾಗ್ಯ ನಾರಾಯಣ

ತಾನು ಕಳೆದುಕೊಂಡ ಸಂಪತ್ತಿಗಿಂತ ಪಡೆದ ಸಂಪತ್ತು ದೊಡ್ಡದು ಎಂಬ ಅನುಭವ ಅವರಿಗೆ ಬಂದಿತ್ತು ಆದರಿಂದಲೆ ಇಂಥ ಮಾತನ್ನಾಡು ವುದು ಸಾಧ್ಯವಾಯಿತು ನವಕೋಟಿಯೇ ಅಲ್ಲ, ಶತಕೋಟಿ ಇದ್ದರೂ ಅವರು ರಾಮನಾಮಕ್ಕಾಗಿ ಬಿಡಲು ಸಿದ್ಧ.

ಅವರು ತಕ್ಕಡಿಯಲ್ಲಿ ತೂಗಿ ನೋಡಿದರು: ಮುತ್ತು-ರತ್ನಗಳನ್ನು ತುಂಬಿದ ಬಂಗಾರದ ಬಿಂದಿಗೆಗಳು ಒಂದು ತಟ್ಟೆಯಲ್ಲಿ; ರಾಮನಾಮದಿಂದ ತುಂಬಿದ ಭಕ್ತಿಯ ಬಿಂದಿಗೆ ಇನ್ನೊಂದು ತಟ್ಟೆಯಲ್ಲಿ. ಪುರಂದರದಾಸರ ಪರೀಕ್ಷಕರಾಗಿ ನಿರೀಕ್ಷಿಸಿದರು: ಯಾವುದು ಹೆಚ್ಚು ಭಾರ ಈ ಎರಡರಲ್ಲಿ

ಬಂಗಾರದ ಬಿಂದಿಗೆ ಮೇಲೆ ಹೋಯಿತು. ಭಕ್ತಿಯ ಬಿಂದಿಗೆ ಭಾರದಿಂದ ಕೆಳಕ್ಕೆ ಕುಸಿಯಿತು ಸರಿ; ಅವರು ಎಲ್ಲ ಸಿರಿಸಂಪದಗಳಿಗೆ ತಿಳಿಸಿ ಅರ್ಪಿಸಿ ತಂಬೂರಿ ಹಿಡಿದು ನಿಂತರು:

ತಾರಕ್ಕ ಬಿಂದಿಗೆ ನಾ ನೀರಿಗ್ಹೋಗುವೆ
ರಾಮನಾಮವೆಂಬೊ ರಸವುಳ್ಳ ನೀರಿಗೆ
ತಾರೇ ಬಿಂದಿಗೆಯ —

ಭಾರೀ ಮುತ್ತಿನ ವ್ಯಾಪಾರಿಯಾಗಿದ್ದ ಶ್ರೀನಿವಾಸ ನಾಯಕ ತನ್ನ ಅಂಗಡಿ ಮುಚ್ಚಿ ಗೆಜ್ಜೆ ಕಟ್ಟಿದ ಎಂದಾಗ ಜನರಿಗೆ ಅಚ್ಚರಿ! ಏನಾಯಿತು ಈ ಪ್ರಾಣಿಗೆ? ಒಳ್ಳೆಯ ವ್ಯಾಪಾರ. ಶ್ರೀಮಂತಿಗೆಯ ಜೀವನ ಬಂಗಲೆ ಯಂಥ ಮನೆ. ಮೆಚ್ಚಿದ ಮಡದಿ ನೆಚ್ಚಿನ ಮಕ್ಕಳು ಎಲ್ಲ ಬಿಟ್ಟು ತಾಳ ಕಟ್ಟುವುದು ಏನು ಹುಚ್ಚು! ಜನರ ಈ ಅಂಬೋಣಗಳು, ಉದ್ಗಾರಗಳು ದಾಸರ ಕಿವಿಗೆ ಮುಟ್ಟದಿರಲಿಲ್ಲ ಅವರು ಈ ಮಾತನ್ನು ಕೇಳಿ ನಕ್ಕಿರಬೇಕು. ಆದರೆ ನಕ್ಕು ಸುಮ್ಮನೆ ಕೂಡಲಿಲ್ಲ ಜನರನ್ನು ಕುರಿತು ಕೇಳಿದರು: "ನಿಮಗೇನು ಭ್ರಮೆ ಹಿಡಿದಿದೆಯೋ? ನಾನೆಲ್ಲಿ ಮುತ್ತಿನ ವ್ಯಾಪಾರ ಬಿಟ್ಟಿ ದ್ದೇನೆ? ನಿಜವೆಂದರೆ ನಾನು ಹಿಂದೆ ಮಾರುತ್ತಿದ್ದುದು ಖೋಟಾ ಮುತ್ತು ಗಳು ಇಂದು ಇದ್ದರೆ ನಾಳೆ ಇಲ್ಲದ ಮುತ್ತುಗಳು ಈಗ ನನಗೆ ಅನಂತ ವಾದ ಅಮೂಲ್ಯವಾದ ಮುತ್ತು ದೊರಕಿದೆ ಅದರ ವ್ಯಾಪಾರಕ್ಕೆ ಹೊರಟಿ ದ್ದೇನೆ ಕೊಂಡುಕೊಳ್ಳಿ ಹಿಂದೆ ನೀವು ಆ ಮುತ್ತುಗಳನ್ನು ಕೊಳ್ಳಲು ನನ್ನೆಡೆಗೆ ಬರಬೇಕಾಗಿತ್ತು ಈ ಮುತ್ತನ್ನು ಕೊಡಲು ನಾನೇ ನಿಮ್ಮೆಡೆಗೆ ಬಂದಿದ್ದೇನೆ ನಮ್ಮ ಅಂಗಡಿಯ ಸರಕನ್ನು ನಿಮ್ಮ ಮನೆಯಂಗಳಕ್ಕೆ ತಂದು ಮುಟ್ಟಿಸುವ ವ್ಯವಸ್ಥೆ ಮಾಡಲಾಗಿದೆ ಕೊಳ್ಳಿ" ಹೀಗೆ ಜಾಹೀರು ಮಾಡುತ್ತ ಸಾಗಿದರು ದಾಸರು

ಮುತ್ತು ಕೊಳ್ಳಿರೋ – ಜನರು
ಮುತ್ತು ಕೊಳ್ಳಿರೋ
ಜ್ಞಾನವೆಂಬ ದಾರದಲ್ಲಿ
ಪೋಣಿಸಿದ ದಿವ್ಯ ಮುತ್ತು

ಧ್ಯಾನದಿಂದ ಕೊಂಬುದಿದನು
ದೀನರಾದ ಭಕ್ತ ಜನರು

*　　*　　*

ಪೊಡವಿಗೆಲ್ಲ ಪುರಂದರವಿಠಲ
ಒಡೆಯನೆಂಬ ದಿವ್ಯ ಮುತ್ತು

ಹಿಂದೆ ರತ್ನಪಡಿ ವ್ಯಾಪಾರ ಮಾತ್ರ ಇತ್ತು. ದಾಸರಾದ ಮೇಲೆ ಅವರ ವ್ಯಾಪಾರ ಕ್ಷೇತ್ರ ಇನ್ನೂ ವಿಸ್ತೃತವಾಯಿತು. ಅವರು ಒಳ್ಳೆಯ ಸಿಹಿ ಹಣ್ಣುಗಳ ಅಂಗಡಿ ತೆರೆದರು. ಸಿಹಿತಿಂಡಿಗಳ ದೊಡ್ಡ ಹೊಟೆಲನ್ನೆ ತೆರೆದರು ! ಸಿಹಿತಿಂಡಿಗಳಿಗೆ ಸಕ್ಕರೆ ಸಿಗದಿದ್ದರೆ ಎನ್ನುವ ಭಯ ಬೇಡ. ಅವರೇ ದೊಡ್ಡ ಸಕ್ಕರೆಯ ಅಂಗಡಿಯನ್ನೂ ತೆರೆದರು. ಎಷ್ಟು ಮಾರಿದರೂ ಮುಗಿಯದಷ್ಟು ಸಕ್ಕರೆ-ಕಲ್ಲುಸಕ್ಕರೆ ದಾಸ್ತಾನು. ಇನ್ನು ಅಂಗಡಿಯವರು ಸಕ್ಕರೆ ಇಲ್ಲ ಎಂದರೆ ಹೆದರಬೇಡಿ. ನಮ್ಮ ದೇಶಕ್ಕೆ ವಿದೇಶದಿಂದ ಸಕ್ಕರೆ ಆಮದು ಮಾಡಬೇಕಿಲ್ಲ. ನಿಮಗೆ ಅಜೀರ್ಣವಾಗುವಷ್ಟು ಸಕ್ಕರೆ ಇಲ್ಲಿದೆ ಬನ್ನಿ ಕೊಳ್ಳಿ." ಎಂದು ಜನರನ್ನು ಕರೆದು ಹಾಡಿದರು ಪುರಂದರದಾಸರು.

ಕಲ್ಲುಸಕ್ಕರೆ ಕೊಳ್ಳಿರೋ – ನೀವೆಲ್ಲರು
ಕಲ್ಲುಸಕ್ಕರೆ ಕೊಳ್ಳಿರೋ
ಎತ್ತ ಹೋದರು ಬಾಡಿಗೆ ಸುಂಕವಿದಕಿಲ್ಲ
ಉತ್ತಮ ಸರಕಿದು ಅತಿ ಲಾಭ ಬರುವಂಥ
ಕಲ್ಲುಸಕ್ಕರೆ ಕೊಳ್ಳಿರೋ

ನಷ್ಟ ಬೀಳುವದಲ್ಲ ನಾತ ಹುಟ್ಟುವದಲ್ಲಿ
ಎಷ್ಟು ಒಯ್ದರು ಬೆಲೆ – ರೊಕ್ಕವಿದಕಿಲ್ಲ
ಕಟ್ಟಿರುವೆ ತಿಂದು ಕಡಿಮೆಯಾಗುವದಲ್ಲ
ಕಲ್ಲುಸಕ್ಕರೆ ಕೊಳ್ಳಿರೋ

ಸಂತೆಸಂತೆಗೆ ಹೋಗಿ ಶ್ರಮಪಡಿಸುವದಲ್ಲ
ಸಂತೆಯೊಳಗೆ ಇಟ್ಟು ಮಾರುವದಲ್ಲ
ಕಾಂತ ಪುರಂದರವಿಠಲನ ನಾಮವೆಂಬ
ಕಲ್ಲುಸಕ್ಕರೆ ಕೊಳ್ಳಿರೋ

*　　*　　*

ಹಣ್ಣು ಮಾರಲು ಬಂದೆವಮ್ಮ

*          *          *

ಹಣ್ಣು ಬಂದಿದೆ – ಜನರು
ಹಣ್ಣು ಕೊಳ್ಳಿರೋ

ಸಕ್ಕರೆ ಒಂದೇ ಅಲ್ಲ; ಹಣ್ಣೊಂದೇ ಅಲ್ಲ; ಸಿಹಿಯಾದದ್ದೆಲ್ಲ ಅವರ ವ್ಯಾಪಾರಕ್ಕೊಳಪಟ್ಟಿದೆ :

ಜೇನು ಬಂದಿದೆ – ಜನರು
ಜೇನು ಕೊಳ್ಳಿರೋ
ಮಧುರವಾದ ಕೊಂಬು ಜೇನು
ಮಾಧವ ನಾಮಸ್ಮರಣೆ
ಜೇನು ಕೊಳ್ಳಿರೋ

ಈ ಪದ್ಯಗಳನ್ನು ಓದಿದಾಗ ಒಬ್ಬ ಸಂಸ್ಕೃತ ಕವಿಯ ಮಾತು ನೆನಪಾಗುತ್ತದೆ—

ದಧಿ ಮಧುರಂ ಮಧು ಮಧುರಂ
ದ್ರಾಕ್ಷಾ ಮಧುರಾ ಸುಧಾಪಿ ಮಧುರೈವ
ಮಧುರಾಪಿ ಯನ್ಮಧುರಂ
ಮಧುರನಾಥಸ್ಯ ನಾಮ ತನ್ಮಧುರಮ್

ಮೊಸರು ಮಧುರವಾಗಿದೆ ಜೇನೂ ಮಧುರವಾಗಿದೆ ದ್ರಾಕ್ಷಿ ತುಂಬ ಮಧುರ ಅಮೃತವೂ ಮಧುರವೇ. ಆದರೆ ಎಲ್ಲಕ್ಕಿಂತ ಹೆಚ್ಚು ಮಧುರ ಯಾವುದು? ಮಧುರಾನಾಥ ಕೃಷ್ಣನ ನಾಮ ಅದೊಂದೆ ನಿಜವಾದ ಮಧುರ

ಈ ಮಾಧುರ್ಯದ ಪೂರ್ಣ ಅನುಭೂತಿ ಪುರಂದರದಾಸರಿಗೆ ಆಗಿದೆ. ಎಂತಲೆ ಭಗವಂತನ ನಾಮ ನುಡಿದಾಗ ಅವರ ನಾಲಿಗೆ ನೀರೂರುತ್ತದೆ.

ಸಾಮಾನ್ಯವಾಗಿ ನಾವು ಯಾವ ವೃತ್ತಿಯಲ್ಲಿರುತ್ತೇವೆ — ಆದರ ಉದ್ಗಾರಗಳು ನಮ್ಮ ಬಳಸುಮಾತಿನಲ್ಲಿ ಹಾಸುಹೊಕ್ಕಾಗಿ ಬಂದುಬಿಡುತ್ತವೆ ಬ್ಯಾಂಕ್ ನೌಕರರಿಗೆ ಜೀವನವೆ ಒಂದು ಪಾಸ್ ಪುಸ್ತಕದಂತೆ ಕಾಣು

ತ್ತದೆ ಅಡಿಗೆಭಟ್ಟ ಮಾತನಾಡುವಾಗ "ಒಳ್ಳೆಯ ಒಗ್ಗರಣೆ" ಹಾಕಿದೆ ಎನ್ನು ತ್ತಾನೆ. ಹೀಗೆಯೇ ಪುರಂದರದಾಸರ ಹಾಡುಗಳಲ್ಲಿ ಅನೇಕ ಕಡೆ ಅವರ ಪೂರ್ವ ವ್ಯಾಪಾರ ಹಲವು ಮುಖದಿಂದ ಹಣಿಕಿಕ್ಕಿದೆ ಅವರು ತಮ್ಮ ವ್ಯಾಪಾರವನ್ನು ಅಲ್ಲಗಳೆಯಲಿಲ್ಲ. ಅದನ್ನೇ ದಾಸತ್ವದೆಡೆಗೆ ಪರಿವರ್ತಿಸಿದರು. ವ್ಯಾಪಾರದ ಸರಕು ಮಾತ್ರ ಬದಲಾಯಿತು—ಅಷ್ಟೆ.

ಅದಕ್ಕೆ ಕಾರಣವೂ ಇದೆ. ಇವರು ದಾಸರಾದಾಗ ಜನ ಆಡಿಕೊಂಡಿರ ಬೇಕು: 'ಇವನು ಎಂಥ ದಾಸ! ಮೊನ್ನೆ ಮೊನ್ನಿನ ತನಕ ಕಿಲುಬುಕಾಸು ಬಿಡದ ಲೋಭಿ ವ್ಯಾಪಾರಿಯಾಗಿದ್ದನಲ್ಲ ಈತ? ಈಗ ಮಾತ್ರ ಭಾರಿ· ಅಪರೋಕ್ಷಿಗಳಂತೆ ವೇಷ ತೊಟ್ಟಿದ್ದಾನೆ. ಶುದ್ಧ ಡಾಂಭಿಕತನ.' ಇಂಥ ಉದ್ಗಾರಗಳು ತೀರ ಸ್ವಾಭಾವಿಕ.

ಲೋಕದ ಸ್ವಭಾವವೆ ಹಾಗೆ. ಒಬ್ಬ ಮೊದಲು ಹೇಗಿದ್ದ ಎನ್ನುವುದ ರಿಂದ ಮತ್ತೆ ಹೇಗಾದ ಎನ್ನುವುದನ್ನು ನಿರಾಕರಿಸಲು ಪ್ರಯತ್ನಿಸುತ್ತೇವೆ ವ್ಯಕ್ತಿಯ ಪೂರ್ವ ಜೀವನವೆ ಅವನ ಉತ್ತರೋತ್ತರದ ಬಾಳಿಗೆಲ್ಲ ಮಾನದಂಡ ವಾಗಿ ಉಳಿಯುತ್ತದೆ. ಈ ಹೀಯಾಳಿಕೆ ಪುರಂದರದಾಸರನ್ನೂ ಬಿಟ್ಟಿಲ್ಲ. ಈತ 'ವ್ಯಾಪಾರೀ ದಾಸ' ಎಂದು ಜನ ಅಣಕವಾಡಿದರು. ಪುರಂದರದಾಸರು ಹೇಳಿದರು: "ಹೌದು; ನಾವು ಇನ್ನೂ ವ್ಯಾಪಾರಿಗಳೆ. ನಮ್ಮ ಕಸುಬನ್ನು ನಾವು ಇನ್ನೂ ಬಿಟ್ಟಿಲ್ಲ."

ವ್ಯಾಪಾರ ನಮಗಾಯಿತು
ಶ್ರೀಪತಿಪಾದಾರವಿಂದ ಸೇವೆಯೆಂಬೊ
ವ್ಯಾಪಾರ ನಮಗಾಯಿತು

ಬಿಳಿಯ ಕಾಗದ ಹೃದಯ ಕಲಮದಾನಿ
ನಾಲಿಗೆ ಎಂಬೋದು ಲೇಖಣಿಯು
ಶ್ರೀಲೋಲನ ಕಥೆ ದಿವ್ಯ ನಾಮಂಗಳ
ಶೀಲ ಮನದಿ ಬರೆದು ಹರಿಗೆ ಒಪ್ಪಿಸುವಂಥ
ವ್ಯಾಪಾರ ನಮಗಾಯಿತು

ಎಂಥ ಭವ್ಯವಾದ ವ್ಯಾಪಾರ! ಎಂಥ ಆನಂದ ಈ ವ್ಯಾಪಾರದಲ್ಲಿ!

ಈ ವ್ಯಾಪಾರದಿಂದ ಕುದುರುವ ಲಾಭವಾದರೂ ಎಂಥ ಅಪಾರ ! ಅವರ ಉದ್ಗಾರ ಕೇಳಿ:

ನುಡಿನುಡಿಗಾನಂದಬಾಷ್ಪ ರೋಮಾಂಚನ

ಇಂಥ ಮೈಮರೆಸುವ ಆನಂದ ಇನ್ನಾವ ವ್ಯಾಪಾರದಲ್ಲಿದೆ ? ಇದರಿಂದ ಪಡೆಯುಬಹುದಾದ ಪ್ರತಿಫಲ ನಿರವಧಿಕ–ಅನಂತ–ಶಾಶ್ವತ

ಕಡೆಯ ಸಂಬಳಕೆಲ್ಲ ಮುಕುತಿ ಸಾಧನವನ್ನು
ಕೊಡುವಂತೆ ತಿರುಗದ ಚೀಟಿ ಬರೆಯಿಸಿಕೊಟ್ಟ –

ಸಂಸಾರದಿಂದ ಬಿಡುಗಡೆ ತನಗೆ ಸಿದ್ಧವಾಯಿತು; ಇನ್ನು ತನಗೆ ಕರ್ಮ ಬಂಧದ ಭಯ ಇಲ್ಲ ಎನ್ನುವ ಆತ್ಮವಿಶ್ವಾಸ ಸಾಮಾನ್ಯರಿಗೆ ಬರುವಂಥದಲ್ಲ. ಸಾಮಾನ್ಯ ಸಾಧನೆಯ ಫಲವೂ ಅಲ್ಲ. ಮುತ್ತಿನ ವ್ಯಾಪಾರ ಮಾಡುವವರಿಗೆಲ್ಲ ಈ ಬೋಧ ಆಗುವಂತಿಲ್ಲ.

ಪುರಂದರದಾಸರ ಸ್ತರ ಬಹಳ ಎತ್ತರದ್ದು ನಮ್ಮ ದೇಶದ ಅನೇಕ ಇತಿಹಾಸ ಸಂಶೋಧಕರೆನ್ನಿಸಿಕೊಂಡವರು ಪುರಂದರದಾಸರ ಮುಂದೆ ಮುಗ್ಗರಿಸಿ ಬಿದ್ದಿದ್ದಾರೆ. ದಾಸರ ಆಧ್ಯಾತ್ಮ ಜೀವನದ ಆಳವನ್ನು ಅರಿಯುವ ತ್ರಾಣ ಇರದ ನಿರ್ವೀರ್ಯ ಸಂಶೋಧನೆಯೇ ಅಂಥ ಮುಗ್ಗರಿಕೆಗೆ ಕಾರಣ ಅಂಥ ಸಂಶೋಧನೆ, ಅಂಥ ಸಂಶೋಧಕ, ಇರುವುದರಿಂದ ಪುರಂದರದಾಸರಿಗೇನೂ ಕೊರತೆಯಿಲ್ಲ ಆದರೆ ಅರಿವಿಲ್ಲದ ಅಂಥ ಪ್ರಜ್ಞಾವಾದ ಹುಟ್ಟುವುದು ದೇಶದ ದೌರ್ಭಾಗ್ಯ; ನಮ್ಮ ದೌರ್ಭಾಗ್ಯ

ಪುರಂದರದಾಸರಂತು ಇಂಥ ಅಗ್ಗದ ಮಾತುಗಳಿಗಾಗಿ ಹೆದರಿ ನಡೆದವರೇ ಅಲ್ಲ ಹರಿಯ ಕರುಣೆಯ ಮುಂದೆ ತನಗೆ ಯಾರ ಭಯವೂ ಇಲ್ಲ ಎಂದು ಈ ವ್ಯಾಪಾರಿ ಧೈರ್ಯವಾಗಿ ಸಾರಿಬಿಟ್ಟಿದ್ದಾರೆ

ಕಂಡಕಂಡವರಿಗೆ ಕಾರ್ಪಣ್ಯವ ಪಟ್ಟು
ಮಂಡೆ ಅಡ್ಡಾಗಿ ನಾ ಬಳಲಲಿಲ್ಲ
ಪುಂಡರಿಕಾಕ್ಷ ಶ್ರೀಪುರಂದರವಿಠಲನು

ದಂಡಿಸಿ ವೀಳ್ಯವ ಕೊಟ್ಟು ಸೇವೆಯೊಳಿಟ್ಟ
ವ್ಯಾಪಾರ ನಮಗಾಯಿತು

ಭಗವಂತನ ಕರುಣೆಯ ಮೇಲೆ ಅವರಿಗೆ ಅಂಥ ಅಪಾರವಾದ ಧೈರ್ಯ ಭರವಸೆ. ಹರಿಯ ಧ್ಯಾನ ನಮಗೆ ರಕ್ಷೆಯಾಗಿರುವ ತನಕ ಯಾರ ಮತ್ಸರವ ನಮ್ಮನ್ನು ಮುಟ್ಟಲಾರದು. ಭಗವದ್ಭಕ್ತ ಎಂದರೆ ಒಂದು ಬೆಂಕಿಯ ಪುಂ ಅದನ್ನರಿಯದ ಈ ನಿಂದಕವೃಂದ ಇರುವೆಗಳಂತೆ ಇದ್ದಾರೆ ಜೋಕೆ, ಬೆಂಕಿ ಬಳಿ ಸುಳಿಯದಿರಿ ಸುಳಿದಿರಾದರೆ, ನೀವು ಮುತ್ತಿದಿರೆಂದರೆ, ಬೆಂಕಿ ನಂ ವುದಿಲ್ಲ ಬೆಂಕಿಗೆ ನೀವು ಕಚ್ಚಲಾರಿರಿ ಆದರೆ ನಿಮ್ಮ ಮೈಯನ್ನು ಮಾ ಸುಟ್ಟುಕೊಳ್ಳುತ್ತೀರ-ಏನೂ ಗೊತ್ತಿರದ ಜನ ಸರ್ವಜ್ಞರಂತೆ ಮಾತನಾ ವುದನ್ನು ಕಂಡು ದಾಸರು ಕನಿಕರದಿಂದ ಹೀಗೆ ಎಚ್ಚರಿಸಬೇಕಾಯಿತು.

ನಾ ನಿನ್ನ ಧ್ಯಾನದೊಳಿರಲು – ಮಿಕ್ಕ
ಹೀನ ಮಾನವರೇನು ಮಾಡಬಲ್ಲರೋ ರಂಗ
ಮುಚ್ಚರಿಸುವವರೆಲ್ಲ ಕೂಡಿ ಮಾಡುವದೇನು?
ಕಿಚ್ಚಿಗೆ ಇರುವೆ ಮುತ್ತುವುದೆ ಕೇಳೆಲೊ ರಂಗ

ಹೀಗೆ ಉಪಮೆ ಇಲ್ಲಿಗೇ ನಿಲ್ಲಲಿಲ್ಲ ಅದು ಮಳೆಗಾಲದ ತೊ ಯಂತೆ ನಿರರ್ಗಳವಾಗಿ ಮುಂದೆ ಹರಿದಿದೆ·

ಧೂಳಲಿ ಕುದುರೆಯು ಮೈಯಾರದಿ ಕುಣಿಯಲು
ಧೂಳು ರವಿಯ ಮೇಲೆ ಮುಸುಕುವುದೆ?
ತಾಳಿದವರಿಗೆ ವಿರುದ್ಧ ಲೋಕದೊಳುಂಟೆ
ಗಾಳಿಗೆ ಗಿರಿಯು ಅಲ್ಲಾಡಬಲ್ಲುದೆ ರಂಗ?

ಒಂದಲ್ಲ, ಎರಡಲ್ಲ ಹಲವು ಬಾರಿ ಅವರು ಈ ಮಾತನ್ನು ೮ ದ್ದರುಂಟು. ಪ್ರತಿಯೊಂದು ಕಡೆಯಲ್ಲೂ ಅವರ ಚಿತ್ತವೃತ್ತಿ ಅಪ ವಾಗಿ ಮಡಿಮೂಡಿದೆ ಇನ್ನೊಂದೆಡೆ ಇದೇ ಮಾತು ಇನ್ನೊಂದು ಬಂದಿದೆ:

ಕೆಂಡಕ್ಕೆ ಒರಳೆ ಮುತ್ತುವುದುಂಟೆ
ಪಾಂಡುರಂಗನ ದಾಸರಿಗೆ ಭಯವುಂಟೆ?

ಕತ್ತಲೆ ರವಿಯನು ಕವಿದು ಮುಚ್ಚುವುದುಂಟೆ
ಹುತ್ತ ಸರ್ಪನ ಕಪ್ಪೆ ನುಂಗುವುದುಂಟೆ?
ಮಾರುತನ ಗುದ್ದಿ ಅಂಗ ನೋಯಿಸುವುದುಂಟೆ!

ದಾಸರ ಸ್ಥೈರ್ಯ ಅಪಾರವಾದದ್ದು. ಅವರು ಹೊಗಳಿದರೆ ಉಬ್ಬುವವರಲ್ಲ. ತೆಗೆಳಿದರೆ ಕುಗ್ಗುವವರಲ್ಲ. ಗೀತೆಯಲ್ಲಿ ಹೇಳಿದ ಗುಣಾತೀತನ ಎಲ್ಲ ಲಕ್ಷಣಗಳೂ ಅವರಲ್ಲಿವೆ:

ಸಮದುಃಖಸುಖಃ ಸ್ವಸ್ಥಃ ಸಮಲೋಷ್ಟಾಶ್ಮಕಾಂಚನಃ ।
ತುಲ್ಯಪ್ರಿಯಾಪ್ರಿಯೋ ಧೀರಸ್ತುಲ್ಯನಿಂದಾತ್ಮಸಂಸ್ತುತಿಃ ॥
ಮಾನಾಪಮಾನಯೋಸ್ತುಲ್ಯಸ್ತುಲ್ಯೋ ಮಿತ್ರಾರಿಪಕ್ಷಯೋಃ ।
ಸರ್ವಾರಂಭಪರಿತ್ಯಾಗೀ ಗುಣಾತೀತಃ ಸ ಉಚ್ಯತೇ ॥

ಗೀತೆಯ ಪ್ರಾರಂಭದಿಂದಲೂ ಈ ಮಾತು ಬಂದಿದೆ:

ಸುಖದುಃಖೇ ಸಮೇ ಕೃತ್ವಾ ಲಾಭಾಲಾಭೌ ಜಯಾಜಯೌ ।

ಆರನೆಯ ಅಧ್ಯಾಯದಲ್ಲಿ ಇದನ್ನೇ ಪರಮಾತ್ಮಯೋಗ ಎಂದು ಕರೆದಿದ್ದಾರೆ:

ಜಿತಾತ್ಮನಃ ಪ್ರಶಾಂತಸ್ಯ ಪರಮಾತ್ಮಾ ಸಮಾಹಿತಃ ।
ಶೀತೋಷ್ಣ ಸುಖದುಃಖೇಷು ತಥಾ ಮಾನಾಪಮಾನಯೋಃ ॥

ಈ ದ್ವಂದಾತೀತವಾದ ಸಮದೃಷ್ಟಿ, ಸ್ಥಿತಪ್ರಜ್ಞತೆ ದಾಸರ ಮಾತಿನಲ್ಲಿ ಪರಿಸ್ಫುಟವಾಗಿ ಮೂಡಿದೆ. ಅವರಿಗೆ ದುಃಖವೂ ಸುಖದಷ್ಟೇ ಪ್ರಿಯ. ಸುಖವೂ ದುಃಖದಷ್ಟೇ ಹೇಯ. ಏಕೆಂದರೆ ಸುಖದುಃಖಗಳೆರಡರಾಚೆಗೆ ನಿಜವಾದ ಸುಖ ಇದೆ ಎಂದು ಅವರಿಗೆ ತಿಳಿದಿದೆ: 'ಸುಖದುಃಖಾತ್ಯಯಃ ಸುಖಮ್.' ಅವರಿಗೆ ಹೆಣ್ಣು–ಹೊನ್ನು ಎಲ್ಲ ಒಂದೆ: ವಿಶ್ವರೂಪಿಯಾದ ಭಗವಂತನ ಪ್ರತೀಕ. 'ಪಂಡಿತಾಃ ಸಮದರ್ಶಿನಃ' ಜನ ಹೊಗಳಿದರೂ ಒಂದೆ; ತೆಗಳಿದರೂ ಒಂದೆ. ತೆಗಳಿಕೆಯಿಂದ ಹೋದದ್ದೇನು? ಹೊಗಳಿಕೆಯಿಂದ ಬಂದದ್ದೇನು? ಹೀಗೆ ಯಾವುದನ್ನು ಸಾಧಿಸಬೇಕೆಂದು ಭಗವಂತ ಅರ್ಜುನ

ನಿಗೆ ಉಪದೇಶಿಸಿದನೋ ಅದು ತನಗೆ ಭಗವದನುಗ್ರಹದಿಂದ ಸಿದ್ಧಿಸಿದೆ ಎಂದು ದಾಸರು ನಿಚ್ಚಳವಾಗಿ ಹೇಳಿಕೊಂಡಿದ್ದಾರೆ:

ಯಾರು ಮುನಿದು ನಮಗೇನು ಮಾಡುವರಯ್ಯ
ಯಾರು ಒಲಿದು ನಮಗೇನು ಕೊಡುವರಯ್ಯ
ಕೊಡಬೇಡ ನಮ್ಮ ಕುನ್ನಿಗೆ ಕಾಸನು
ಈಯಲುಬೇಡ ನಮ್ಮ ಶುನಕಗೆ ತಳಗಿಯ
ಆನೆಯಮೇಲೆ ಪೋಪನ ಶ್ವಾನ ಮುಟ್ಟಬಲ್ಲುದೇ?
ನಮಗೆ ಶ್ರೀಪುರಂದರವಿಠಲನೆ ಸಾಕು

ಎಂಥ ದಿಟ್ಟತನದ ಮಾತು! ಸಮಾಜದ ಮುಂದೆ ನಿಂತು ಇಂಥ ಮಾತನ್ನಾಡುವ ಧೈರ್ಯ ಬರಡು ದಾಸರಿಗೆಲ್ಲ ಬರುವಂತಿಲ್ಲ. ವಿಮಾನ ದಲ್ಲಿ ಕುಳಿತು ಸಾಗುತ್ತಿದ್ದಾಗ ನೆಲದಲ್ಲಿ ಓಡಾಡುವ ಜನ ಇರುವೆಗಳ ಸಾಲಿನಂತೆ ಕಾಣುತ್ತಾರೆ. ಈ ಜನದ ಸಂಭ್ರಮ ಕಂಡು ಒಂದು ಕ್ಷಣ ನಗು ಬರುತ್ತದೆ; ವಿಸ್ಮಯವೂ ಆಗುತ್ತದೆ. ಎತ್ತರದ ಬೆಟ್ಟದ ಮೇಲೆ ನಿಂತು ಕೆಳಕ್ಕೆ ಕಣ್ಣು ಹಾಯಿಸಿದಾಗ ಆ ಔನ್ನತ್ಯದ ದಿವ್ಯ ಸ್ಪರ್ಶ ನಮಗೆ ಉಂಟಾಗಿ ಮೈ ಪುಳಕಿತ ವಾಗುತ್ತದೆ. ಪುರಂದರದಾಸರೋ ಭಗವದನುಗ್ರಹದ ಗೌರೀಶಂಕರದ ಮೇಲೆ ನಿಂತಿದ್ದಾರೆ. ತಪ್ಪಲನ್ನು ಕೂಡ ತಲುಪದೇ ನಾವೇ ಎಲ್ಲರಿಗಿಂತ ಎತ್ತರ ದಲ್ಲಿರುವವರು ಎಂದು ಭ್ರಮಿಸಿ ಹಾರಾಡುವ ಜನರ ಹಗರಣ ಕಂಡು ಅವರಿಗೆ ನಗೆ ಬರುತ್ತದೆ. 'ಅಯ್ಯೋ ಪಾಪ' ಎಂಬ ಮರುಕಮೂಡುತ್ತದೆ. ಆನೆಯ ಮೇಲೆ ಪೋಪರ ಶ್ವಾನ ಮುಟ್ಟಬಲ್ಲುದೇ? ಇನ್ನಾದರೂ ದಾರಿಗೆ ಬನ್ನಿ ಎಂದು ಎಚ್ಚರಿಕೆ ನೀಡುತ್ತಾರೆ.

ಇಷ್ಟೆಲ್ಲ ಹೇಳಿದರೂ ಜನಕ್ಕೆ ಅರ್ಥ ಆಗಲಿಲ್ಲ. ಅವರ ಸಮಕಾಲ ದಲ್ಲಂತೂ ಅವರನ್ನು ಅರಿತುಕೊಂಡವರು ವ್ಯಾಸರಾಯರಂಥ ಒಬ್ಬಿಬ್ಬರು ಮಹಾನುಭಾವರು ಮಾತ್ರ. ಉಳಿದವರಿಗೆಲ್ಲ ದಾಸರು ಒಂದು ಸಮಸ್ಯೆ! ಇಷ್ಟು ಸಂಪತ್ತನ್ನೆಲ್ಲ ತೊರೆದು ಒಡನೇ ಹೀಗೇಕಾದರು? ಸಾಮಾನ್ಯ ಜನರು ಇದಕ್ಕೆ ಕೊಡುವ ಉತ್ತರ ಒಂದೆ: ಈತನಿಗೆ ಹುಚ್ಚು ಹಿಡಿದಿರಬೇಕು. ಇಲ್ಲ ದಿದ್ದರೆ ಹಣದ ಕೊಪ್ಪರಿಗೆಯನ್ನೇ, ಉಪ್ಪರಿಗೆಯ ಮನೆಯನ್ನೇ ತೊರೆದು ತಂಬೂರಿ ಹಿಡಿದು ತಿರುಗುತ್ತಾರೆಯೇ? ಪಾಪ. ನಾಯಕರಿಗೆ ಹುಚ್ಚು!

ಅವರ ಪ್ರಾರಬ್ಧ !, ಜನ ಎಷ್ಟು ಸುಲಭದಲ್ಲಿ ಸಿದ್ಧಾಂತಕ್ಕೆ ಬಂದುಬಿಡುತ್ತಾರೆ ! ಎಷ್ಟು ನಿರಾಳವಾಗಿ ವೇದಾಂತ ಮಾತನಾಡುತ್ತಾರೆ ! ಇದನ್ನು ಕಂಡು ಪುರಂದರದಾಸರು ನೊಂದರು. ತನ್ನನ್ನು ಮರುಳ–ಹುಚ್ಚ ಎಂದು ಕರೆದವರಿಗೆ 'ಹೌದು, ನೀವನ್ನುವುದು ನಿಜ, ಎಂದು ಸಂಜ್ಞೆಸಿ ಹರಸಿದರು

ಹುಚ್ಚು ಹಿಡಿಯಿತು — ಎನಗೆ
ಹುಚ್ಚು ಹಿಡಿಯಿತು
ಅಚ್ಯುತನ ಧ್ಯಾನವೆಂಬೊ
ಅಚ್ಚುಮೆಚ್ಚು ತಲೆಗೆ ಏರಿ
ಕೇಶವನ ಹೂವ ಮುಡಿದು ಕುಣಿದು ಕುಣಿದು ಆಡುವೆ
ಕೃಷ್ಣನಂಘ್ರಿ ಕಮಲದಲ್ಲಿ ಸೊರಗಿ ಸೊರಗಿ ಬೀಳುವೆ

ಮೇಲಿಂದ ಮೇಲೆ ನೋಡುವವರಿಗೆ ಈ ಪದ್ಯದಲ್ಲಿ ಏನೂ ವಿಶೇಷ ಕಾಣುವಂತಿಲ್ಲ ಇದು ನಮ್ಮಲ್ಲಿ ಬೆಳೆದು ಬಂದ ಒಂದು ದೌರ್ಬಲ್ಯ. ಆಳವಾದ ಅಧ್ಯಯನ ನಮಗೆ ಬೇಡವಾಗಿದೆ. ಮೊದಲ ನೋಟಕ್ಕೇನೇ ಥಟ್ಟನೆ ನಾವು ಅಭಿಪ್ರಾಯ ಕೊಟ್ಟುಬಿಡುತ್ತೇವೆ. ಎಲ್ಲ ನೀರಿನ ಮೇಲೆ ಸದ್ದುಮಾಡಿ ಈಜಾಡುವವರೆ ! ಆಳವಾದ ತಳಕ್ಕೆ ಇಳಿದು ಮುತ್ತುಗಳನ್ನು ಹೆಕ್ಕಿ ತರುವವರು ವಿರಳ. ಈಜು ಬಾರದೆ ದಡದಲ್ಲಿ ನಿಂತ ಜನ ಈಜುವುದನ್ನು ಕಂಡೇ 'ಉಘೇ ಉಘೇ' ಎಂದು ಕೊರಳಿಗೆ ಮಾಲೆ ಹಾಕುವಾಗ ಮುಳುಗುವ ಗೋಜು ಯಾರಿಗೆ ಬೇಕು !

ಈ ಹುಚ್ಚು, ಈ ದೈವೀ ಉನ್ಮಾದಕ್ಕೆ ಸಾಧನೆಯಲ್ಲಿ ಬಹಳ ಮಹತ್ತ್ವದ ಸ್ಥಾನ ಉಂಟು. "ಉನ್ಮತ್ತಃ ಜಡವತ್ ಚರೇತ್' ಎನ್ನುತ್ತದೆ ಶಾಸ್ತ್ರ. ಜ್ಞಾನಿ ಹುಚ್ಚರಂತೆ, ಏನೂ ಅರಿಯದ ಗಾಂಪರಂತೆ ನಡೆದುಕೊಳ್ಳುತ್ತಾನೆ. ಇನ್ನೊಂದು ಬಗೆಯಲ್ಲಿ ಹೇಳುವುದಾದರೆ ಅವನ ನಡತೆ ಸಾಮಾನ್ಯ ಜನಕ್ಕೆ ಹುಚ್ಚುತನದಂತೆ ಕಾಣುತ್ತದೆ ಮಾನವೀ ಆಕಾಂಕ್ಷೆ ಸಮತೋಲ ತಪ್ಪಿ ಒಂದೇ ಕಡೆ ವಿಕೇಂದ್ರೀಕೃತವಾದಾಗ ಜನ ಅದನ್ನು 'ಹುಚ್ಚು' ಎನ್ನುತ್ತಾರೆ ಹೆಣ್ಣಿನ ಹಂಬಲ ಮಿತಿಮೀರಿ ಹುಡುಗಿಯರ ಬೆನ್ನು ಹಿಂದೆ ತಿರುಗುವವರಿದ್ದಾರೆ ಅಂಥವರಿಗೆ ಹೆಣ್‌ಮರುಳ ಎನ್ನುತ್ತೇವೆ ಇದು ನಮಗೆ ಅರ್ಥವಾಗುವ ಮರಳು. ಇಂಥದೆ ಇನ್ನೊಂದು ಹುಚ್ಚು ಇದು ದೇವರಿಗಾಗಿ ಕಾತರ;

ದೇವರನ್ನು ಕಾಣುವ ಹಂಬಲ; ಸೇರುವ ಆಸೆ. ಆದರೆ ಈ ಎರಡು ಹುಚ್ಚು-ಗಳಿಗೆ ಎಂಥ ಅಂತರ! ಒಂದು ಹಗಲು; ಒಂದು ರಾತ್ರಿ. ಹಗಲು ಎಚ್ಚರಿದ್ದರೆ ರಾತ್ರಿ ನಿದ್ರೆ. ರಾತ್ರಿ ಎಚ್ಚರಿದ್ದವನು ಹಗಲು ನಿದ್ರಿಸುತ್ತಾನೆ ಎರಡೂ ಕಡೆಯೂ ಜಾಗೃತಿ ಸಾಧ್ಯ ಅಲ್ಲ. ಇದನ್ನು ಗೀತೆ ಹೀಗೆ ಸಾರಿದೆ:

ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ ।
ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ ॥

ಪುರಂದರದಾಸರನ್ನು ನಾರದರ ಭೌಮರೂಪ ಎಂದು ನಂಬಿದವರುಂಟು. ಅಂಥ ನಾರದರು ತನ್ನ ಭಕ್ತಿಸೂತ್ರದಲ್ಲಿ ಹೇಳಿದರು: ಯತ್ ಜ್ಞಾತ್ವಾಮತ್ತೋ ಭವತಿ. "ಭಗವಂತನನ್ನು ತಿಳಿದವನು ಉನ್ಮತ್ತನಾಗುತ್ತಾನೆ."

ಕಳ್ಳು ಕುಡಿದರೂ ಒಂದು ಆನಂದವಿದೆ ಎನ್ನುತ್ತಾರೆ. ಭಗವದ್ಭಕ್ತಿ ಎಂಬ ಕಳ್ಳು ಕುಡಿದುಬಿಟ್ಟ ಈ ದಾಸರ ಪಾಡು ಹೇಗಾಗಿರಬೇಡ! ಅವರಿಗೆ ಆನಂದವೆ ಆನಂದ.

ತಾನು ಹಿಡಿದ ತಂಬೂರಿಯ ಮೇಲೆ ಅವರಿಗೆ ಅಂಥ ನಂಬಿಕೆ ಇತ್ತು. ತಾನು ತೊರೆದದ್ದು ಕಿಂಚಿತ್ತು, ಪಡೆದದ್ದು ಮಹತ್ತು ಎಂಬ ಅರಿವಿತ್ತು. 'ತಂಬೂರಿ ಮೀಟಿದವ, ಭವಾಬ್ಧಿ ದಾಟಿದವ', ಎಂದು ಅವರು ಅಭಿಮಾನ ದಿಂದ ಹೇಳಿಕೊಂಡಿದ್ದಾರೆ. ಸಂಸಾರದಲ್ಲಿ ನಿರ್ಲಿಪ್ತತೆ ಅವರಿಗೆ ಸಾಧಿಸಿತ್ತು. ನಾವು ಅನಂತದ ಪಥಿಕರು; ದಾರಿಯಲ್ಲಿ ಇಂದು ಈ ಛತ್ರ, ನಾಳೆ ಇನ್ನೊಂದು ಛತ್ರ ಎನ್ನುವ ಮನೋಭಾವ ಅವರದು. ಅವರ ನಿರ್ಲಿಪ್ತತೆಯ ಆವಿಷ್ಕಾರ ಅವರ ಈ ಮಾತಿನಲ್ಲಿ ತುಂಬ ಸುಂದರವಾಗಿ ಬಂದಿದೆ:

ಹೇಗೆ ಬರೆದೀತು ಪ್ರಾಚೀನದಲ್ಲಿ
ಹಾಗೆ ಇರಬೇಕು ಸಂಸಾರದಲ್ಲಿ
ಹಕ್ಕಿ ಕೂತಿತು ಅಂಗಣದಲ್ಲಿ
ಹಾರಿ ಹೋಯಿತು ಆ ಕ್ಷಣದಲ್ಲಿ
ಆಡುವ ಮಕ್ಕಳು ಮನೆ ಕಟ್ಟಿದರು
ಆಟ ಸಾಕೆಂದು ಮುರಿದೋಡಿದರು
ಸಂತೆ ನೆರೆದೀತು ನಾನಾ ಪರಿ
ತಿರುಗಿ ಆಯಿತು ತಮ್ಮ ತಮ್ಮ ದಾರಿ

ಸಂಸಾರವೊಂದು ಸಂತೆ ಎನ್ನುವ ಹಂತಕ್ಕೆ ಬಂದ ಜೀವ ಇಂಥ ಮಾತ ನ್ನಾಡುವುದು ಸ್ವಾಭಾವಿಕ. ಅವರಿಗೆ ಯಾವುದೂ ಅಸಹಜವಾಗಿ—ಅಸ್ವಾಭಾವಿಕ ವಾಗಿ ಕಾಣುವುದಿಲ್ಲ. ಎಲ್ಲವೂ ಭಗವಂತನ ಇಚ್ಛೆಯಂತೆ ನಡೆದಿದೆ....ಅವನ ಇಚ್ಛೆಯಲ್ಲಿ ಕೃತ್ರಿಮತೆಗೆಡೆಯಿಲ್ಲ. ಅವನದು ಈ ಸೃಷ್ಟಿ. ಈ ಮಾತು ತಿಳಿದಾಗ ಎಲ್ಲವೂ ಸಹಜ ಸುಂದರ; ಎಲ್ಲವೂ ಆನಂದಮಯ. ನಮ್ಮ ದೌರ್ಬಲ್ಯ ಕೂಡ ಭಗವಂತನ ಕೊಡುಗೆ. ಅದನ್ನು ಒಳ್ಳೆಯ ರೀತಿಯಲ್ಲಿ ಉಪಯೋಗಿಸುವುದು ಬಿಡುವುದು ನಮ್ಮ ಕೈಯಲ್ಲಿದೆ.

ಹಕ್ಕಿ ಅಂಗಳದಲ್ಲಿ ಕೂತಂತೆ ನಾವಿಲ್ಲಿ ಇದ್ದೇವೆ. ಮಕ್ಕಳ ಉಸುಕಿನ ಮನೆಯಂತೆ ನಮ್ಮದು ಸಂಸಾರ. ಇಂದು ಉಂಟು; ಇದ್ದೇವೆ. ನಾಳೆ ಇಲ್ಲ; ಹೊರಟುಬಿಡುತ್ತೇವೆ. ಯಾರು ಇಲ್ಲಿ ಶಾಶ್ವತವಾಗಿ ಉಳಿದವರು ?

ಈ ನಿರ್ಲಿಪ್ತತೆ ಸಿದ್ಧಿಸಿದಾಗ ಬಡತನದಲ್ಲಿ ಕೂಡ ಸಿರಿತನಕ್ಕಿಂತ ಹೆಚ್ಚು ಸುಖ. ವಾಸ್ತವವಾಗಿ ದಾಸರು ಸಿರಿತನದ ಪರಾಕಾಷ್ಠೆಯನ್ನು ಕಂಡು ಅನು ಭವಿಸಿ, ಹೇಳಿ ತೊರೆದವರು. ಬಡತನವನ್ನು ಮೆಚ್ಚಿ ವರಿಸಿದವರು. ಇನ್ನೆಂ ದಿಗೂ ಸಿರಿತನ ತನಗೆ ಬರದಿರಲಿ—ಕಡು ಬಡವನಾಗಿಯೆ ತಾನು ಇರುವಂತಾಗಲಿ ಎಂದು ದೇವರಲ್ಲಿ ಮೊರೆಯಿಟ್ಟವರು :

ತಿರಿಬರೆ ಅನ್ನ ಹುಟ್ಟಲು ಬೇಡ
ಅನ್ನ ಹುಟ್ಟಿದರೆ ಬಟ್ಟೆ ದೊರಕಲು ಬೇಡ
ಬಟ್ಟೆ ದೊರಕಿದರೆ ಇಂಬು ದೊರಕಲು ಬೇಡ
ಇಂಬು ನಿನ್ನ ಪಾದಾರವಿಂದದಲ್ಲಿ ಸಂತೋಷ ತೋರಿಸಯ್ಯ
ಇಂದಿರಾರಾಧ್ಯ ಶ್ರೀಪುರಂದರವಿಠಲ

ಹಾಗಿದ್ದರೆ ಅವರಿಗೆ ಬಡತನ ಎಷ್ಟು ಪ್ರಿಯವಾಗಿರಬೇಡ. ಬಡತನ ಎಂದರೆ ಅವರಿಗೆ ಏಕೆ ಅಷ್ಟು ಪ್ರೀತಿ ? ಕಾರಣವಿಷ್ಟೆ; ಬಡತನ ಹರಿಯ ಕರುಣೆಯ ಸಂಕೇತ. ಅದಕ್ಕಿಂತ ಹಿರಿಯ ಭಾಗ್ಯ ಎಂಥದು ?

ಹರಿ ನೀನೊಲಿವಂತೆ ಮಾಡು
ಒಲಿದರೆ ತಿರಿವಂತೆ ಮಾಡು
ತಿರಿದದಾರು ನೀಡದಂತೆ ಮಾಡು
ನೀಡಿದರೆ ಹೊಟ್ಟೆ ತುಂಬದಂತೆ ಮಾಡು

ಹೊಟ್ಟೆ ತುಂಬಿದರೆ ಬಟ್ಟೆ ದೊರೆಯದಂತೆ ಮಾಡು
ಬಟ್ಟೆ ದೊರೆತರೆ ಇಂಬು ದೊರೆಯದಂತೆ ಮಾಡು

ಲೋಕದಲ್ಲಿ ಇಷ್ಟೆಲ್ಲ ಕೋಲಾಹಲ ಇರುವುದು 'ಹೊಟ್ಟೆಗಾಗಿ, ಮತ್ತು 'ಗೇಣುಬಟ್ಟೆಗಾಗಿ ಅಲ್ಲವೇ? ಅದನ್ನೇ ನಿಗ್ರಹಿಸಿಕೊಂಡರೆ ಮತ್ತೆ ಸುಖಕ್ಕೆ ತಡೆ ಯಾವುದು? ತನಗೆ ಪ್ರಿಯವಾದ ಈ ಮಾತನ್ನು ದಾಸರು ಇನ್ನೊಂದೆಡೆ ವ್ಯಂಗ್ಯವಾಗಿ ನುಡಿದು ಹಾಸ್ಯ ಮಾಡಿದ್ದಾರೆ:

ಆರು ಬದುಕಿದರಯ್ಯ ಹರಿ ನಿನ್ನ ನಂಬಿ
ತೋರು ಈ ಜಗದೊಳಗೆ ಒಬ್ಬರನು ಕಾಣೆ
ದೊರೆ ಪುರಂದರವಿಠಲ ನಿನ್ನನ್ನು ನಂಬಿದರೆ
ತಿರುಪೆಯೂ ಹುಟ್ಟಲೊಲ್ಲದು ಕೇಳು ಹರಿಯೆ

ತಿರುಪೆ ಹುಟ್ಟದಿರುವುದು ಅವರಿಗೆ ಹರಿಕರುಣೆಯ ಸಂಕೇತವಾಗಿ ಕಾಣುತ್ತದೆ. ಇಂಥ ಪರಿಶುದ್ಧವಾದ ಭಕ್ತಿಭಾವ ವ್ಯವಹಾರದಲ್ಲಿ, ಸಮಾಜ ದಲ್ಲಿ ಬಿದ್ದಿರುವಷ್ಟು ಕಾಲ, ಅರ್ಥವಾಗುವ ಸಾಧ್ಯತೆ ಕಮ್ಮಿ. ಏಕೆಂದರೆ ನಮ್ಮ ಅಜ್ಞಾನವನ್ನೇ ಬುದ್ಧಿವಂತಿಕೆಯೆಂದು ನಾವು ಭ್ರಮಿಸಿಕೊಂಡಿರುತ್ತೇವೆ.

ರವೀಂದ್ರನಾಥ ಟಾಗೂರರ ಒಂದು ಕವಿತೆಯ ಭಾವ ಹೀಗಿದೆ. ಒಬ್ಬ ರಾಜ ಭಾರಿ ಬೆಲೆಯ ದೇವಾಲಯವೊಂದನ್ನು ಕಟ್ಟಿಸುತ್ತಾನೆ. ಬಡವರ ಮನೆಗೆಲ್ಲ ಕೊಳ್ಳಿಯಿಟ್ಟು, ಇಪ್ಪತ್ತು ಮಿಲಿಯ ಬಂಗಾರದ ನಾಣ್ಯ ವೆಚ್ಚ ಮಾಡಿ ಕಟ್ಟಿದ ಭವ್ಯ ಕಟ್ಟಡ ಅದು ಆದರೆ ಸಾಧು ನರೋತ್ತಮ ಅತ್ತ ಸುಳಿಯುವುದಿಲ್ಲ ಒಂದು ಮರದ ಕೆಳಗೆ ಅವನ ದೇವರ ಪೂಜೆ. ಜನರೆಲ್ಲ ಅವನ ಬಳಿ ಮುಕುರಿದರು. ಈ ಬಂಗಾರದ ದೇವಾಲಯವನ್ನು ಕೇಳುವವರಿಲ್ಲ

ರಾಜ ಚಿಂತಾಕುಲನಾಗಿ ನರೋತ್ತಮನ ಬಳಿ ಬಂದು ಕೇಳಿದ: "ಸ್ವಾಮಿ! ನೀವೇಕೆ ನನ್ನ ಬಂಗಾರದ ದೇಗುಲ ಬಿಟ್ಟು ಇಲ್ಲಿ ಮಣ್ಣಿನಲ್ಲಿ ಕುಳಿತು ಪೂಜಿಸು ತ್ತಿದ್ದೀರಿ?"

ನರೋತ್ತಮನೆಂದ: "ನಿನ್ನ ಗುಡಿಯಲ್ಲಿ ದೇವರಿಲ್ಲ"

ಎರಡು ಕೋಟಿ ಬಂಗಾರದ ನಾಣ್ಯಗಳಿಂದ ಕಟ್ಟಿದ 'ಚಿನ್ನದಪಂಜರ' ದಲ್ಲಿ ದೇವರಿಲ್ಲ! ರಾಜನಿಗೆ ಸಿಟ್ಟುಬಂತು. ಸಾಧುವನ್ನು 'ನನ್ನ ರಾಜ್ಯ

ದಿಂದ ತೊಲಗು ಎಂದ. ಸಾಧುವಿಗೆ ಪರಮಾನಂದವಾಯಿತು. ದೇವರನ್ನೆ ರಾಜ್ಯದಿಂದ ಓಡಿಸಿದ ಇವನು ತನ್ನನ್ನು ಓಡಿಸುವುದು ಏನು ಮಹಾ! ಆವನು ಸಂತಸದಿಂದ ಹೊರಟು ನಿಂತು ಹೇಳಿದ ಹೌದು, ತೊಲಗಿಸು ನನ್ನನ್ನು; ನನ್ನ ದೇವರನ್ನು ತೊಲಗಿಸಿದಲ್ಲಿಗೇ ತೊಲಗಿಸು.

ದುಡ್ಡಿನ ವಿಷಯದಲ್ಲಿ ಈ ನರೋತ್ತಮ ಬೇರೆ ಅಲ್ಲ, ಪುರಂದರ ದಾಸರು ಬೇರೆ ಅಲ್ಲ ಇಬ್ಬರದು ಒಂದೇ ಮನೋಭಾವ ಕಠೋಪ ನಿಷತ್ತು ಇದನ್ನೇ ಹೇಳಿದ್ದು 'ನ ಸಾಂಪರಾಯಃ ಪ್ರತಿಭಾತಿ ಬಾಲಂ ಪ್ರಮಾದ್ಯಂತಂ ವಿತ್ತಮೋಹೇನ ಮೂಢಮ್'. ದುಡ್ಡಿನ ಮದದಿಂದ ವ್ಯಾಮೋಹಿತ ಹುಡುಗಾಟದ ಜನಕ್ಕೆ ದೇವರ ಮನೆ ಎಟುಕುವಂಥದಲ್ಲ ಪುರಂದರದಾಸರು ಈ ಮಾತನ್ನು ಸರಿಯಾಗಿ ಅರ್ಥಮಾಡಿಕೊಂಡವರು

ಎರಡು ಸಾವಿರ ವರ್ಷಗಳ ಮೊದಲೇ ಜೀಸಸ್ ಹೇಳಿದ್ದ ಸೂಜಿಯ ಮೊನೆಯಲ್ಲಿ ಒಂಟೆ ನುಸುಳೀತು; ಆದರೆ ದೇವರ ರಾಜ್ಯದೊಳಗೆ ಶ್ರೀಮಂತ ಪ್ರವೇಶಿಸಲಾರ—ಎಂದು ದೇವರ ರಾಜ್ಯಕ್ಕೆ ದುಡ್ಡಿನ ಬೇಲಿ ಹಾಕಿ ತಾವೇಕೆ ದೂರ ನಿಲ್ಲಬೇಕು? ಅದಕ್ಕೆಂದೇ ಪುರಂದರದಾಸರು ಹೇಳಿದರು, ಹರಿ ನೀನೊಲಿದರೆ ತಿರಿವಂತೆ ಮಾಡು, ಎಂದು

ಭಾಗವತದಲ್ಲಿ ಒಂದು ಪ್ರಸಂಗ ಬರುತ್ತದೆ: ಅಶ್ವತ್ಥಾಮನ ಅಸ್ತ್ರ ಉತ್ತರೆಯ ಗರ್ಭವನ್ನು ಪ್ರವೇಶಿಸಿದಾಗ ಕೃಷ್ಣ ಸುದರ್ಶನವನ್ನು ಪ್ರಯೋಗಿಸಿ ಪರೀಕ್ಷಿತನನ್ನು ಬದುಕಿಸುತ್ತಾನೆ ಇಂಥ ಸಾವಿರ ಆಪತ್ತುಗಳಲ್ಲಿ ಪಾಂಡವರ ಪಕ್ಷದಲ್ಲಿ ನಿಂತು ಸಲಹಿದ ಕೃಷ್ಣನನ್ನು ಕಂಡು ಕುಂತಿ ಭಾವವಶಳಾಗುತ್ತಾಳೆ. ಆಗ ಅವಳು ನುಡಿದ ಮಾತುಗಳನ್ನು ನೋಡಿ

> ವಿಪದಃ ಸಂತು ನಃ ಶಶ್ವತ್ ತತ್ರ ತತ್ರ ಜಗದ್ಗುರೋ ।
> ಭವತೋ ದರ್ಶನಂ ಯತ್ ಸ್ಯಾದಪುನರ್ಭವದರ್ಶನಮ್ ॥
> ಜನ್ಮೈಶ್ವರ್ಯಶ್ರುತಶ್ರೀಭಿರೇಧಮಾನಮದಃ ಪುಮಾನ್ ।
> ನೈವಾರ್ಹತ್ಯಭಿಧಾತುಂ ವೈ ತ್ವಾಮಕಿಂಚನಗೋಚರಂ ॥

"ಜಗದ್ಗುರು ಹರಿಯೇ, ನಮ್ಮ ಬಾಳಿನುದ್ದಕ್ಕು ಆಗಾಗ್ಗೆ ವಿಪತ್ತುಗಳು ಬರುತ್ತಿರಲಿ. ಏಕೆಂದರೆ ಆಗ ಮಾತ್ರವೇ ನೀನು ಕಾಣಿಸಿಕೊಳ್ಳುವೆ. ನಿನ್ನ

ದರ್ಶನ ದೊರಕಿತೆಂದರೆ ಭವದ ಭಯವಿಲ್ಲ. ಅಂಥ ದರ್ಶನಕ್ಕಾಗಿ ನಾನು ಆಪತ್ತುಗಳನ್ನು ಪ್ರೀತಿಸುತ್ತೇನೆ. ಸಂಪತ್ತಿನಿಂದ ಮತ್ತೇರಿದ ಜನ ನಿನ್ನ ಹೆಸರನ್ನು ಕೂಗಿ ಕರೆವುದಕ್ಕೂ ಅಧಿಕಾರಿಯಲ್ಲ. ನೀನು ಬಡತನಕ್ಕೆ ಒಲಿಯುವವನು. ಬಡವರ, ಕಡವರ. ನೀನು ಬಡವರ ಸಂಪತ್ತು. ಬಡವರು ನಿನ್ನ ಸಂಪತ್ತು. "ನಮೋಽಕಿಂಚನವಿತ್ತಾಯ."

ಪುರಂದರದಾಸರ ಮಾತಿನ ಇನ್ನೊಂದು ರೂಪವನ್ನು ನಾವು ಕುಂತಿಯ ವಿನಂತಿಯಲ್ಲಿ ಕಾಣಬಹುದು—ಅಲ್ಲವೆ? ಎಲ್ಲರೂ ದೇವರ ಬಳಿಯಲ್ಲಿ ಹೀಗೆ ಮೊರೆಯಿಡುವಂತಿಲ್ಲ. ಇದು ಬಹಳ ಎತ್ತರದ ಸ್ವರ. ದುಡ್ಡು ಬೇಕೆಂದು, ಮಡದಿ ಮಕ್ಕಳು ಬೇಕೆಂದು, ಸಂಸಾರದಲ್ಲಿ ಸುಖ ಬೇಕೆಂದು ದೇವರಿಗೆ ಹರಕೆ ಹೊರುವವರುಂಟು. ಪುರಂದರದಾಸರು ಇಂಥವರ ಸಾಲಿಗೆ ಸೇರಲಿಲ್ಲ. ಸೇರಿದ್ದರೆ ಸುಲಭವಾಗಿ ಅಳತೆ ಮಾಡಿ ಇವರ ತೂಕ ಇಷ್ಟು ಎಂದು ಹೇಳಿಬಿಡಬಹುದಿತ್ತು. ಆದರೆ ಅವರು ಅಳತೆ ಮೀರಿ ನಿಂತಿದ್ದಾರೆ. ನಮ್ಮಲ್ಲಿರುವ ಎಲ್ಲ ತೂಕದ ಕಲ್ಲೂ ಅವರ ಗುಲಗುಂಜಿಯ ಭಾರಕ್ಕೆ ನಿಲ್ಲದು. ಇದೇ ನಮಗೆ ಒದಗಿರುವ ಕಷ್ಟ.

ಅಂತೂ ಪುರಂದರದಾಸರ ಮನೋವೃತ್ತಿಯಿಂದ ನಮಗೆ ಭಗವಂತನ ಮಾತು ಇನ್ನಷ್ಟು ಸ್ಫುಟವಾಯಿತು. 'ಯಸ್ಯಾನುಗ್ರಹಮಿಚ್ಛಾಮಿ ತಸ್ಯ ವಿತ್ತಂ ಹರಾಮ್ಯಹಮ್'. ಬಡತನ ಬಂತು ಎಂದರೆ ಭಗವಂತನ ಕರುಣೆ ಅತ್ತ ಹರಿದಿದೆ ಎಂದೇ ಅರ್ಥ; ದೇವರ ರಾಜ್ಯದ ಬಾಗಿಲು ಆತನಿಗಾಗಿ ತೆರೆದಿದೆ ಎಂದೇ ಅರ್ಥ.

## ತೆರೆ ಸರಿದಿದೆ; ಕರೆ ಬಂದಿದೆ

ಕೃಷ್ಣ ಗೀತೆಯಲ್ಲಿ ಹೇಳಿದ: 'ಸಮತ್ವಂ ಯೋಗ ಉಚ್ಯತೇ', ಸಿದ್ಧಿ ಅಸಿದ್ಧಿ ಎರಡನ್ನೂ ಒಂದೇ ದೃಷ್ಟಿಯಲ್ಲಿ ಕಾಣಬೇಕು. ಈ ಸಮದೃಷ್ಟಿಯಲ್ಲಿ ಸಜ್ಜನಿಕೆಯ ಬಾಳಿನ ಸೂತ್ರ ಅಡಗಿದೆ. ಮನುಷ್ಯ 'ದ್ವಂದ್ವಾತೀತಃ ವಿಮತ್ಸರಃ' ಆಗಬೇಕು. ಆಗ ಬಾಳು ಹಸನಾಗುತ್ತದೆ. ಇಹದಲ್ಲಿ ಮಾತ್ರವಲ್ಲ; ಪರದಲ್ಲಿ ಕೂಡ. 'ತತ್ರ ಕೋ ಮೋಹಃ ಕಃ ಶೋಕಃ ಏಕತ್ವಮನು ಪಶ್ಯತಃ' ಎಂದು ಉಪನಿಷತ್ತು ಹೇಳಿದ್ದೂ ಅದನ್ನೆ. ಪುರಂದರದಾಸರು

ಈ ನಿಟ್ಟಿನಲ್ಲಿ ಎಂಥ ಪಕ್ವಚೇತನ ಎನ್ನುವ ಬಗೆಗೆ ಹಿಂದಿನ ಪ್ರಕರಣದಲ್ಲಿ ಸಾಕಷ್ಟು ವಿವರಣೆಗಳನ್ನು ಕಂಡೆವು.

ಅವರಿಗೆ ಸಮಾಜದ ಸ್ಥಿತಿಯನ್ನು ಕಂಡು, ಅಜ್ಞಾನದ ವಿಜೃಂಭಣೆಗಳನ್ನು ಕಂಡು ಒಮ್ಮೊಮ್ಮೆ ಕನಿಕರ. ಒಮ್ಮೊಮ್ಮೆ ಹುಸಿ ಮುನಿಸು. ಮಕ್ಕಳು ದಾರಿ ತಪ್ಪಿದಾಗೆಲ್ಲ ಹಿರಿಯರು ಕೋಪಿಸಿಕೊಳ್ಳುತ್ತಾರಲ್ಲ— ಅಂಥ ಕೋಪ. ಕೋಪದ ಭರದಲ್ಲಿ ಅವರು ಜೋರಾಗಿಯೇ ಮಾತನಾಡತ್ತಾರೆ ನೇರ ನಾಟುವಂತೆ ಹಂಗಿಸುತ್ತಾರೆ. ದ್ವಂದ್ವಾತೀತರಾಗಿ ನಿಂತು ಈ ದ್ವಂದ್ವಗಳನ್ನು ಕಾಣುವುದರಿಂದಲೇ ಅವರು ಇಂಥ ಮಾತುಗಳನ್ನಾಡುವುದು ಸಾಧ್ಯವಾಯಿತು.

ನಮ್ಮ ಜೀವನದಲ್ಲಿ ಒಂದು ಕ್ಷಣವಾದರೂ ವ್ಯರ್ಥವಾಗಬಾರದು. ಏಕೆಂದರೆ ಕಾಲಪುರುಷ ಸುಮ್ಮನೆ ಕೂಡುವುದಿಲ್ಲ. ನಾಳೆ ಮಾಡುವುದನ್ನು ಇಂದೇ ಮಾಡಬೇಕು. ಇನ್ನೇನು ತಾಸು ಬಾರಿಸಿಬಿಡುತ್ತಾರೆ. ಆ ಮೇಲೆ ಇಲ್ಲಿ ನಿಲ್ಲುವ ಹಾಗಿಲ್ಲ. ಕಾಣದ ನಾಡಿಗೆ ಗಾಡಿಬಿಡಬೇಕು.

ತಾಸು ಬಾರಿಸುತ್ತಿದೆ ಕೇಳಿ— ಹರಿದಾಸರೆಲ್ಲ
ಹಾಸು ಮಂಚ ಸುಪ್ಪತ್ತಿಗೆಯಲ್ಲಿ — ಹಗಲು ಇರುಳು
ಹೇಸರ ಕತ್ತೆಯಂತೆ ಹೊರಳಿ — ಸ್ತ್ರೀಯರ ಕೂಡಿ
ಬೇಸರ ಪಡದೆ ನಿತ್ಯ ಉರುಳಿ

ಈ ಪರಿಯಿಂದಲಿ ಮನುಷ್ಯನಾಯುಷ್ಯ
ವೃಥಾ ವೃಥಾ ಹೋಯಿತು ಹೋಯಿತು ಎಂದು
ತಾಸು ಬಾರಿಸುತಿದೆ ಕೇಳಿ

ಆದರಿಂದ ಆದಷ್ಟು ಬೇಗ ನಾವು ನಮ್ಮ ಕುಡಿಕೆಯಲ್ಲಿ ತುಂಬುವಷ್ಟು ಭಗವದ್ಭಕ್ತಿಯ ಮಧುವನ್ನು ತುಂಬಿಸಿಕೊಳ್ಳುವುದು ಒಳಿತು:

ನರನಾದಮೇಲೆ ಹರಿನಾಮ ಜಿಹ್ವೆಯೊಳಿರಬೇಕು

ಅಷ್ಟ ಮದಂಗಳ ತುಳಿಯಲು ಬೇಕು
ದುಷ್ಟರ ಸಂಗವ ಬಿಡಲು ಬೇಕು
ಕೃಷ್ಣ ಕೇಶವ ಎನ್ನಲು ಬೇಕು

ಬಂದದ್ದುಂಡು ಸುಖಿಸಲು ಬೇಕು
ನಿಂದಾಸ್ತುತಿಗಳ ತಾಳಲು ಬೇಕು
ತಂದೆ ಪುರಂದರವಿಠಲನೆನಬೇಕು

'ಬಂದದ್ದುಂಡು ಸುಖಿಸಲುಬೇಕು'—ಇದು ಎಲ್ಲ ಉಪನಿಷತ್ತುಗಳ ಪ್ರಥಮ ಆದೇಶ: ತೇನ ತ್ಯಕ್ತೇನ ಭುಂಜೀಥಾಃ'. ಅಂಥವನ್ನು ಮಾತ್ರವೇ ಗೀತೆಯಲ್ಲಿ ಹೇಳಿದಂತೆ 'ತುಲ್ಯನಿಂದಾಸ್ತುತಿಃ' ಆಗುತ್ತಾನೆ. ಆಚಾರ್ಯ ಮಧ್ವರ ಒಂದು ಹಾಡು ಹೀಗಿದೆ:

ಕುರು ಭುಂಕ್ಷ್ವ ಚ ಕರ್ಮ ನಿಜಂ ನಿಯತಂ
ಹರಿಪಾದವಿನಮ್ರಧಿಯಾ ಸತತಮ್ ॥

ಪುರಂದರದಾಸರ ಪದ್ಯದ ಆ ಮೂರು ಚರಣಗಳು ಆಚಾರ್ಯರ ಈ ಪದ್ಯದ ಪೂರ್ತಿ ಅನುವಾದದಂತಿದೆ. ದಾಸರು ಆಚಾರ್ಯ ಮಧ್ವರಲ್ಲಿ ತುಂಬ ಗೌರವ ತಾಳಿದವರು; ಅವರೆ ಮೂಲಗುರು ಎಂದು ನಂಬಿದವರು; ಅವರ ಉಪದೇಶದ ದಾರಿಯಲ್ಲಿ ಸಾಗಿ ಸಿದ್ಧಿಯನ್ನು ಕಂಡವರು. ಆದರೆ ಮತದ ತತ್ತ್ವಗಳಿಗಾಗಿ ಸಭೆಯಲ್ಲಿ ಜಗಳಕ್ಕೆ ನಿಲ್ಲುವುದು ಅವರಿಗೆ ಇಷ್ಟವಲ್ಲ. ಭೇದ–ಅಭೇದ ಎಂದು ಸಭೆಯಲ್ಲಿ ಬಡಿದಾಡಬೇಡಿ. ವಾದಕ್ಕೆ ಜನರು ಮರುಳಾದಾರೆ ಹೊರತು ದೇವರು ಮರುಳಾಗುವಂತಿಲ್ಲ. ತತ್ತ್ವವನ್ನು ಮನನದಿಂದ ತಿಳಿಯಬೇಕು. ಬರಿದೆ ಮೂರ್ಖರಂತೆ ಬಡಿದಾಡಿಕೊಳ್ಳಬೇಡಿ ಎಂದು ಅವರು ಮೂರ್ಖ ಪಂಡಿತರನ್ನು ಮುಖದೆದುರೆ ಜರೆದರು:

ಏಕೆ ಮೂರ್ಖನಾದ್ಯೊ—ಮನುಜ
ಏಕೆ ಮೂರ್ಖನಾದ್ಯೊ

ಸಾಧು ಜನರ ಸಂಗವ ಮಾಡು
ಭೇದಾಭೇದವ ತಿಳಿದು ನೋಡು
ವಾದ ಬುದ್ಧಿಯ ಮಾಡದಿರು—

'ನೈಷಾ ತರ್ಕೇಣ ಮತಿರಾಪನೇಯಾ'—ಭಗವಂತ ತರ್ಕಕ್ಕೆ ಸಿಗುವವನಲ್ಲ ಎಂದ ಹೇಳುತ್ತಿದೆ ಉಪನಿಷತ್ತು. ಮತ್ತೇಕೆ ಈ ದಾರಿ? ಈ ಪಾಂಡಿ

ತ್ಯದಿಂದ, ರಾಜಸಭೆಯು ಶ್ರೀಮಂತಿಕೆಯು ಬಾಲ ಆಡಿಸಿ ಬದುಕುವವರಿಗೆ ಭಗವಂತನ ಭಕ್ತಿ ಸಿಗುವಂಥದಲ್ಲ.

ಎಂತಹುದೋ ನಿನ್ನ ಭಕುತಿ?
ವ್ರಣವನಾಶಿಪ ಕುರುಡು ನೊಣ ಮೊಸರ ಕಂಡಂತೆ
ಧನಿಕರ ಮನೆಗೆ ಕ್ಷಣ ಕ್ಷಣಕೆ ಹೋಗಿ
ತನು ಬಾಡಿ ತುಟಿಯೊಣಗಿ ಅಣಕ ನುಡಿ ಕೇಳುವ ಕೃ-
ಪಣ ಮನಕ್ಕೆಂತಹುದು ನಿನ್ನಯಾ ಭಕುತಿ?

ಆದರಿಂದ ಈ ಮಾನಾವೋಪಾಸನೆ ಸಾಕು. ಮನುಷ್ಯ ಕೊಟ್ಟರೆ ಏನು ಕೊಟ್ಟಾನು. ದೇವರಲ್ಲಿ ಮರೆಹೊಕ್ಕಾಗ ಮಾತ್ರವೇ ನಮ್ಮ ಆತ್ಮ ನಿಜವಾದ ಬಿಡುಗಡೆಯನ್ನು ಪಡೆಯುತ್ತದೆ. ಆಗ ಜನ ನಿಂದಿಸಬಹುದು. ಹುಚ್ಚ ಎನ್ನಬಹುದು. ಆದರೆ ನಾವು ಅದನ್ನು ತಾಳುವ ದ್ವಂದ್ವಾತೀತ ರಾಗದೆ ಬೇರೆ ಮಾರ್ಗವಿಲ್ಲ ಎಂದು ಪುನಃ ದಾಸರು ಎಚ್ಚರಿಸುತ್ತಾರೆ: ಹೆದರಬೇಡಿ, ಇದೆ ಸರಿಯಾದ ದಾರಿ ಎಂದು ಅಭಯ ನೀಡುತ್ತಾರೆ ದಾಸರು:

ಇಂತು ಶ್ರುತಿ ಸ್ಮೃತಿಗಳಲಿ ಸಾರುತಿದೆ ಕೋ
ಒಂಟಿಯಲಿ ಮುನಿಗಳಾಶ್ರಮದಿ ನೆಲಸಲು ಬೇಕು
ಹೆಂಟೆ—ಬಂಗಾರ ಸಮ ತಿಳಿಯಲು ಬೇಕು

ತಾಳ್ಮೆಗೆ ದಾಸರು ಕೊಟ್ಟಷ್ಟು ಮಹತ್ತ್ವವನ್ನು ಬೇರಾರೂ ಕೊಡಲಿಲ್ಲ. ಸಾಧಕನಲ್ಲಿ ಇರಬೇಕಾದ ಇನ್ನೊಂದು ಮುಖ್ಯ ಗುಣ, ಜಿಜ್ಞಾಸೆ: 'ಸಂದೇಹ ಬಂದಲ್ಲಿ ಕೇಳಿಕೊ'. ಅನುಭವಿಯಾದ ಗುರುವಿನ ಪಾದ ಆಶ್ರಯಿಸಿದ್ದಲ್ಲದೆ ತತ್ತ್ವ ನಿಶ್ಚಯವಾಗುವಂತಿಲ್ಲ. ಸಂತೆಗಳಲ್ಲಿ, ಸಿನೆಮಾ ಮಂದಿರಗಳಲ್ಲಿ, ಸೂಳೆ ಕೇರಿಗಳಲ್ಲಿ ತತ್ತ್ವ ಮಾರಾಟಕ್ಕೆ ಸಿಗುವುದಿಲ್ಲ. ಅದಕ್ಕೆ ಶ್ರವಣ ಬೇಕು; ಮನನ ಬೇಕು: 'ಶ್ರೋತವ್ಯೋ ಮಂತವ್ಯಃ'.

ಆಗ ಮೋಹ ಕಳೆದೀತು. ತೆರೆ ಸರಿದೀತು. ಆದರೆ ಮೋಹದ ಸುಳಿಯಲ್ಲಿ ಸಿಕ್ಕಿರುವಾಗಲೇ ಕರೆ ಬಂದುಬಿಟ್ಟರೆ ಜನ ಗಾಬರಿಗೊಳ್ಳುತ್ತಾರೆ. ಬಾಳಿನುದ್ದಕ್ಕೂ ವ್ಯೆಮರೆತು ಬಾಳಿದ ತಪ್ಪಿಗಾಗಿ ಆ ಕೊನೆಯ ಕ್ಷಣದಲ್ಲಿ

ಅನಂತವಾದ ಪಶ್ಚಾತ್ತಾಪ ಪಡುತ್ತಾರೆ. ಅದಕ್ಕಾಗಿ ಈಗಲೆ ಸಿದ್ಧತೆ ನಡೆಯಲಿ ಎಂದು ಅವರು ಸಾರಿದರು.

ಡಂಭಕ್ಕಾಗಿ ಧರ್ಮ-ದೇವರನ್ನು ನೆಚ್ಚಿಕೊಂಡವರನ್ನು ಕಂಡರೆ ಅವರಿಗೆ ಜುಗುಪ್ಸೆ. ಅಂಥವರು ತಮ್ಮ ಹೊಟ್ಟೆಗಾಗಿ ದೇವರನ್ನು ಬಳಸಿಕೊಳ್ಳುವವರು; ಹಸಿವಾದಾಗ ಪೂಜೆಗೇಳುವವರು ಎನ್ನುತ್ತಾರೆ ದಾಸರು.

ಹಸಿವಾಯಿತೇಳಿ ದೇವರ ತೊಳೆಯೆಂಬರು
ಹಸನಾಗಿ ಮನದಲ್ಲಿ ಮುಟ್ಟಿ ಪೂಜೆಯ ಮಾಡರು

ಈ ನೇಮ, ಈ ಜಪ, ಈ ಆಡಂಬರಗಳನ್ನು ಕಂಡು ಸೃಷ್ಟಿಸಿದ ದೇವರಿಗೆ ಅಚ್ಚರಿಯಾಯಿತಂತೆ. ಏಕೆಂದರೆ ಇದೆಲ್ಲ ದುಡ್ಡಿಗಾಗಿ ನಡೆದಿವೆ ದೇವರಿಗಾಗಿ ಅಲ್ಲ. ಈ ಅಸ್ತಿಕತೆಯ ಪ್ರದರ್ಶನ ಏಕೆ ಬೇಕು?

ಮನ ಶುದ್ಧಿಯಿಲ್ಲದವಗೆ ಮಂತ್ರದ ಫಲವೇನು?
ತನು ಶುದ್ಧಿಯಿಲ್ಲದವಗೆ ತೀರ್ಥದ ಫಲವೇನು?

ಮಿಂದಲ್ಲಿ ಫಲವೇನು ಮೀನು ಮೊಸಳೆಯಂತೆ
ನಿಂದಲ್ಲಿ ಫಲವೇನು ಶ್ರೀಶೈಲದ ಕಾಗೆಯಂತೆ
ಹೊರಗೆ ಮಿಂದು ಒಳಗೆ ಮೀಯದವರ ಕಂಡು
ಬೆರಗಾಗಿ ನಗುತ್ತಿದ್ದ ಪುರಂದರವಿಠಲ

ಹೊಲೆಯ ಬಂದಾನೆಂದು ಒಳಗೆ ದೇವರಮಾಡಿ
ಘಣಘಣ ಘಂಟೆ ಬಾರಿಸುತ
ತನುವಿನ ಕೋಪ ಹೊಲೆಯಲ್ಲವೇನಯ್ಯ
ಮನಸಿನ ವಂಚನೆ ಹೊಲೆಯಲ್ಲವೇನಯ್ಯ

ಒಂದು ಹಾಡಿನಲ್ಲಂತು ಇಂಥ ಡಂಭದ ಪ್ರದರ್ಶನದ ಒಂದು ಯಾದಿಯನ್ನೇ ಕೊಟ್ಟು ಇಂಥವರಿಗೆ ಹರಿ ಒಲಿಯುವುದೇ ಇಲ್ಲ ಎಂದು ಗಟ್ಟಿಯಾಗಿ ಹೇಳಿದ್ದಾರೆ.

ಮೆಚ್ಚನಯ್ಯ ಹರಿ ಒಪ್ಪನಯ್ಯ

ಊರೊಳೆಲ್ಲರು ಅರಿವಂತೆ ಅರುಣೋದಯದಲಿ ಎದ್ದು
ನೀರೊಳಗಿನ ಕಪ್ಪೆಯಂತೆ ಮುಳುಗಿ ಮುಳುಗಿ ಏಳುವವರ
ಮೆಚ್ಚನಯ್ಯ

ಚರ್ಮವ ತೊಳೆದಿಟ್ಟು ಗೋಪಿಚಂದನ ರೇಖೆಯ ಬರೆದು
ಹೆಮ್ಮೆ ವೇಷದಿಂದ ಕುಣಿವ ಡಂಭಕತನದವರ
ಮೆಚ್ಚನಯ್ಯ

ಪಟ್ಟೆಯ ಮಡಿಯನುಟ್ಟುಕೊಂಡು ಪೆಟ್ಟಿಗೆ ಹರವಿಟ್ಟುಕೊಂಡು
ಕೊಟ್ಟೆ ಎತ್ತಿನ ಘಂಟೆಯಂತೆ ಮಂತ್ರವನ್ನು ನುಡಿವುತಿಹರ
ಮೆಚ್ಚನಯ್ಯ

ಕೃತ್ರಿಮವಾದ ಆಚರಣೆಯ ಮೇಲೆ ಅವರಿಗೆ ಎಂಥ ಆಕ್ರೋಶ ನೋಡಿ. "ಬ್ರಾಹ್ಮಣರು" ಎಂಬ ಪಟ್ಟಿ ಅಂಟಿಸಿಕೊಂಡು, ಇಂಥ ಕೃತ್ರಿಮ ವೇಷದಿಂದ ಸಮಾಜವನ್ನು ಸುಲಿಯುವ ಮಂದಿಯನ್ನು ಹೊಡೆದೋಡಿಸಬೇಕು – ಎನ್ನುತ್ತಾರೆ ದಾಸರು. ಎಂಥ ನಿರ್ದಾಕ್ಷಿಣ್ಯವಾದ ದಿಟ್ಟ ಮಾತು:

ಹಾರುವನ್ನ ಕುಟ್ಟಬೇಕು
ಪರಧನ ಪರಸತಿ ವಶನಾದ
ಹಾರುವನ್ನ ಕಂಡರೆ ಚಂಪೆ ಮೇಲೆ ಹೊಡೆಯಬೇಕು

ನಮ್ಮ ಕಾಲಕ್ಕು ಪುರಂದರದಾಸರ ಕಾಲಕ್ಕು ಬಹಳ ಅಂತರ. ಅವರ ಕಾಲವೆಂದರೆ ಜಾತಿ-ಧರ್ಮಗಳಿಗೆ ಪ್ರಾಬಲ್ಯವಿದ್ದ ಕಾಲ. ಆ ಕಾಲದಲ್ಲಿ ಬ್ರಾಹ್ಮಣ್ಯವನ್ನು ಇಷ್ಟು ಉಗ್ರವಾಗಿ ಟೀಕಿಸಬೇಕೆಂದರೆ ಸಾಮಾನ್ಯವಾದ ಎದೆಗಾರಿಕೆ ಸಾಲದು. ಸಮಾಜವನ್ನು ಮೀರಿ ಎತ್ತರದಲ್ಲಿ ನಿಂತ ವ್ಯಕ್ತಿ ಮಾತ್ರ ಇಂಥ ಮಾತನ್ನಾಡಬಲ್ಲ.

ಆದರೆ ಅವರ ಸಮಕಾಲದ ಜನರೆಲ್ಲ ಅವರಷ್ಟು ಎತ್ತರಕ್ಕೆ ಏರುವುದು ಸಾಧ್ಯವೆ? ನಮ್ಮ ಕಾಲದಲ್ಲಿ ಹೇಗೆ ಹಾಗೆ ದಾಸರ ಕಾಲದಲ್ಲೂ ಇಂಥ 'ಆಸ್ತಿಕ'ರ ಗುಂಪು ಸಾಕಷ್ಟು ದೊಡ್ಡದಾಗಿಯೇ ಇತ್ತು. ಬಲಿಷ್ಠವಾಗಿಯೂ ಇತ್ತು. ಅಂಥವರನ್ನು ದಾಸರ ಈ ಮೊಣಚಿನ ಗಂಳಿಗೆ ಗಾಸಿಗೊಳಿಸಿತು.

ಅವರು ತಮ್ಮ ತಪ್ಪನ್ನು ತಿದ್ದಿಕೊಳ್ಳುವ ಬದಲು ದಾಸರನ್ನೇ ತರಾಟೆ ತೆಗೆದುಕೊಂಡರು. ಬೈದರು, ಹಂಗಿಸಿದರು, ಹಳಿದರು, ಏನೇನೊ ಮಾಡಿದರು ಆದರೆ ಪುರಂದರ ದಾಸರು ಇವಕ್ಕೆಲ್ಲ ವಿಚಲಿತರಾಗುವಂತಿರಲಿಲ್ಲ. ಗಾ ಬೀಸಿದರೆ ಹತ್ತಿಯ ರಾಶಿ ಹಾರೀತು. ಬಂಡೆ ಚಲಿಸುವಂತಿಲ್ಲ. ಇದ ಬಂಡೆ ಎಂದು ತಿಳಿಯದೆ ತಲೆ ಗಟ್ಟಿಸ ಬಂದವರು ತಮ್ಮ ತಲೆಯನ್ನೆ ನೋಯಿಸಿಕೊಂಡು ತೆಪ್ಪಗೆ ತೆರಳಿದರು.

ಬೈಯುವವರ ಮೇಲೆ ದಾಸರು ಈಷತ್ತೂ ಕೋಪಿಸಿಕೊಳ್ಳಲಿಲ್ಲ ಅಂಥವರಿಗೆ ಚಾಪೆ ಹಾಸಿ ಸ್ವಾಗತ ಹೇಳಿದರು:

ಬೈಯಿರೋ ಬೈಯಿರೋ
ಮನಮುಟ್ಟಿ ಬೈಯಿರೋ
ಚೆನ್ನಾಗಿ ಬೈದೆನ್ನ ಧನ್ಯನ ಮಾಡಿರೋ
ಅವರು ಇವರು ಬೈದರೆಂಬೊ
ಹೀನ ಬುದ್ಧಿ ನನಗಿಲ್ಲ
ನಾ ಮಾಡಿದಷ್ಟು ಪಾಪವನ್ನು
ಅಳಿದು ಹಾಕಿ ಹಂಚಿಕೊಳ್ಳಿರೋ

ಬೈಯುವವರನ್ನು ಸ್ವಾಗತಿಸುವಾಗಲೆ ಅವರಿಗೆ ಬುದ್ಧಿವಾದದ ಎಚ್ಚರಿ ಕೊಡುವ ಜಾಣು ಬೇರೆ: 'ನಾ ಮಾಡಿದಷ್ಟು ಪಾಪವನ್ನು ಅಳಿದು ಹಂ ಕೊಳ್ಳಿರೋ'. ಮಾಡಿದವನ ಪಾಪ ಆಡಿದವನ ಮೇಲೆ. ಇನ್ನೊಬ್ಬರನು ನಿಂದಿಸಿ ಏಕೆ ನೀವು ಪಾಪದ ಹೊರೆ ಹೆಚ್ಚಿಸಿಕೊಳ್ಳುತ್ತೀರಿ — ಈ ಸವಾಲ ನಿಂದಕ ಮನೋವೃತ್ತಿಯ ಮೂಲಕ್ಕೇ ಕೊಡಲಿಯೇಟಿನಂತಿದೆ.

ಆಡುವ ನಾಲಿಗೆ ನೂರು ಬಗೆ ಆಡುತ್ತದೆ. ಸಾಧಕನಿಗೆ ಅದರಿಂ ಆಗಬೇಕಾದದ್ದೇನೂ ಇಲ್ಲ. ಏಕೆ ನಿಂದಿಸಿದಿರಿ ಎಂದು ಅವರ ಬಳಿ ವಾದಕೆ ನಿಲ್ಲುವುದಿಲ್ಲ. ಅವರು ಏನನ್ನು ಬೇಕಾದರೂ ಆಡುತ್ತಿರಲಿ; ನಮ್ಮ ಸಾಧ ನಮಗೆ ಎನ್ನುವ ದಾರ್ಢ್ಯ ಈ ಪದ್ಯದಲ್ಲಿ ಬಂದಿದೆ:

ಸುಮ್ಮನಿರು ಮನವೆ—ನಿನ್ನೊಳು ನೀನು
ಸುಮ್ಮನಿರು ಮನವೆ

ಒಂದನಾಡಿದರೆ ಒಂಬತ್ತನಾಡುವರು
ನಿಂದಿಸಿ ನುಡಿವರು ಗುರುಹಿರಿಯರ
ತಂದೆ ಪುರಂದರವಿಟಲರಾಯನ್ನ
ಕುಂದದೆ ಭಜಿಸಿ ನೀ ಸುಖಿಯಾಗು ಮನವೆ

ನಿಂದಕರು ಸಾಕಷ್ಟು ಇರಲಿ. ಅವರಿಂದ ನಮಗೇನೂ ಕೆಡುಕಿಲ್ಲ. ನಮ್ಮ ಪಾಪ ತೊಳೆದುಹೋದೀತು. ನಮ್ಮ ಕೇರಿ ಶುದ್ಧವಾದೀತು. ಆದರಿಂದ ಉಪಕಾರ ಆಯಿತಲ್ಲ !

ನಿಂದಕರಿರಬೇಕು
ಹಂದಿಯಿದ್ದರೆ ಕೇರಿ ಹ್ಯಾಂಗೆ ಶುದ್ಧಿಯೊ ಹಾಂಗೆ
ನಿಂದಕರಿರಬೇಕು

ಪುರಂದರದಾಸರ ನಿರ್ಲಿಪ್ತತೆ ಇಲ್ಲಿಗೇ ಮುಗಿಯಲಿಲ್ಲ. 'ಮಾನಾಪಮಾನಯೋಸ್ತುಲ್ಯಃ' ಎಂದಾಗ ಮಾನವೂ ಇರಲಿ ಅಪಮಾನವೂ ಇರಲಿ — ಎರಡೂ ಒಂದೆ ಎಂದೇನೂ ಅವರು ಹೇಳಲಿಲ್ಲ. ಅವರು ಇನ್ನೂ ಒಂದು ಹೆಜ್ಜೆ ಮುಂದೆ ಇದ್ದಾರೆ. ಅವರು ಹೇಳುತ್ತಾರೆ: ಮಾನ ಬೇಡ. ಅದರಿಂದ ಮತ್ತನಾಗಿ ದೇವರನ್ನು ಮರೆಯುವ ಭಯವುಂಟು. ಅಪಮಾನವೇ ಇರಲಿ. ಆಗ ದೇವರ ಬಳಿ ಸಾಗಲು ದಾರಿ ಇನ್ನಷ್ಟು ಸುಗಮವಾಗುತ್ತದೆ.

ಅಪಮಾನವಾದರೆ ಒಳ್ಳಿತು
ಮಾನದಿಂದ ಅಭಿಮಾನ ಪುಟ್ಟುವುದು
ಮಾನದಿಂದ ತಪ ಹಾನಿಯಾಗುವುದು
ಮಾನಿ ದುರ್ಯೋಧನನಿಗೆ ಹಾನಿಯುಂಟಾಯಿತು

ಮಾನದ ಹಾನಿಯನ್ನು ಕೇಳಿದಿರಿ. ಮುಂದೆ ಅಪಮಾನದಿಂದ ಏನು ಲಾಭ ಎನ್ನುವುದನ್ನು ಕೇಳಿ :

ಅಪಮಾನದಿಂದಲಿ ತಪ ವೃದ್ಧಿಯಾಗುವುದು
ಅಪಮಾನದಿಂದ ಪುಣ್ಯ ಸಫಲವಾಗುವುದು
ಅಪಮಾನದಿಂದಲಿ ನೃಪ ಧ್ರುವರಾಯಗೆ
ಕಪಟನಾಟಕ ಕೃಷ್ಣ ಅಪರೋಕ್ಷನಾದನು

ಅಪಮಾನದಿಂದ ಸಿದ್ಧಿ ಪಡೆದವರಲ್ಲಿ ಧ್ರುವನಿಗಿಂತ ಒಳ್ಳೆಯ ಉದಾಹರಣೆ ಇನ್ನೊಂದಿದೆಯೆ? ಧ್ರುವನಿಗೆ ಯಾವುದು ಯಾವುದು ದಾರಿ ಕಾಣಿಸಿತೋ ಅದೇ ತನಗೂ ಬೇಕು ಎನ್ನುತ್ತಾರೆ ದಾಸರು :

ದೀನರಕ್ಷಕ ನಮ್ಮ ಪುರಂದರವಿಠಲ
ಏನು ಬೇಡೆನಗಪಮಾನವೇ ಇರಲಿ

ಎಂಥ ಪುಣ್ಯತಮವಾದ ಉದ್ಗಾರ ! ಈ ಮಾತುಗಳನ್ನಾಡಬಲ್ಲ ಚೇತನ ಸಂಸ್ಕಾರ ಎಷ್ಟು ಉನ್ನತವಾಗಿರಬೇಡ! ಪುರಾಣ ಶಾಸ್ತ್ರಗಳ ಸಾರವೆಲ್ಲ ಈ ಅಪಮಾನದ ಸ್ವಾಗತದಲ್ಲಿ ಅಡಗಿದೆ.

ಮಹಾಭಾರತದಲ್ಲಿ ಒಂದು ಮಾತು ಇದೆ: ಸಮ್ಮಾನವನ್ನು ಕಂಡರೆ ವಿಷದಂತೆ ದೂರ ಸರಿಯಬೇಕು; ಅಪಮಾನವನ್ನು ಅಮೃತದಂತೆ ಸ್ವಾಗತಿಸಬೇಕು. ಏಕೆಂದರೆ, 'ಅಯಂ ಹಿ ಲೋಕೋ ಮಾನಸ್ಯ ಅಸೌ ಮೌನಸ್ಯ.' ಮಾನಸಮ್ಮಾನಗಳೆಲ್ಲ ಈ ಲೋಕದಲ್ಲಿ ಎಷ್ಟೋ ಅಷ್ಟೆ. ಆದರೆ ಸಾಧಕರಿಗೆ ಅಪಮಾನ ಮುಂದಿನ ಲೋಕದ ದಾರಿಗೆ ದೀಪವಾಗಿ ನಿಲ್ಲಬಲ್ಲುದು. ಮಹಾಭಾರತದ ಆಶಯ ದಾಸರ ನುಡಿಯಲ್ಲಿ ಪರಿಪೂರ್ಣವಾಗಿ ಮೂಡಿಬಂದಿದೆ.

ದೌರ್ಜನ್ಯದ ಬಗೆಗೆ ಅವರು ಕೊಟ್ಟ ಚಿತ್ರವನ್ನು ಕಂಡರೆ ಅವರ ಈ ನಿಲುವು ನಮಗೆ ಸ್ಪಷ್ಟವಾಗುತ್ತದೆ.

ಜಾಲಿಯ ಮರದಂತೆ—
ಧರೆಯೊಳು ದುರ್ಜನರು
ಜಾಲಿಯ ಮರದಂತೆ

ಮೂಲಾಗ್ರ ಪರಿಯಂತ
ಮುಳ್ಳು ಕೂಡಿಪ್ಪಂಥ
ಜಾಲಿಯ ಮರದಂತೆ

ಬಿಸಿಲಲ್ಲಿ ಬಳಲಿ ಬಂದವರಿಗೆ ನೆರಳಿಲ್ಲ
ಹಸಿದು ಬಂದವರಿಗೆ ಹಣ್ಣು ಇಲ್ಲ

ದುರ್ಜನರ ವ್ಯಕ್ತಿತ್ವದ ಬಗೆಗೆ ಇದಕ್ಕಿಂತ ಒಳ್ಳೆಯ ಉಪಮಾನವನ್ನು ಯಾವ 'ಕಾಳಿದಾಸ'ನೂ ಕೊಟ್ಟಿಲ್ಲ. ಪುರದಂರದಾಸರ ಕಾವ್ಯಶಕ್ತಿ ಭಕ್ತಿ ಯಂತೆಯೆ ಅವರು ಬಯಸಿದಂತೆ ಸಹಸ್ರಮುಖಿಯಾಗಿ ಹರಿದು ಬಂದಿದೆ. ಅವರು ಹೇಳಿದಂತೆ ಕುಣಿದಿದೆ. ಗುರುವಿನ ಕರುಣ ಅವರನ್ನು ಆ ಎತ್ತರಕ್ಕೆ ಏರಿಸಿತ್ತು. 'ಸಮತ್ವಂ ಯೋಗಃ–' ಎನ್ನುವ ಮಾತು ಅವರ ಬಾಳಿನಲ್ಲಿ ಹಾಸುಹೊಕ್ಕಾಗಿತ್ತು.

## ಗುರುಕರುಣ—ಹರಿಚರಣ

ಗುರು ಇಲ್ಲದೆ ಜ್ಞಾನ ಸಿದ್ಧಿ ಇಲ್ಲ: ಶುದ್ಧಿ ಇಲ್ಲ. ಪರಮಹಂಸ ವ್ಯಾಸರಾಯರು ಪುರಂದರದಾಸರಿಗೆ ಗುರುಗಳಾಗಿ ದೊರೆತು ಅವರ ಸಿದ್ಧಿಗೆ ಹೊನ್ನ ಕಲಶವಿಟ್ಟರು. ದಾಸರು ದೊಡ್ಡ ಭಾಗ್ಯಶಾಲಿಗಳು. ಎಂದೇ ವ್ಯಾಸ ರಾಯರಂಥ ಯೋಗಿ ಅವರಿಗೆ ಗುರುವಾಗಿ ದೊರೆತರು. ವ್ಯಾಸರಾಯರ ಒಡನಾಟ ಸಣ್ಣ ಮಾತೇನೂ ಅಲ್ಲ. ಐದಾರು ಶತಕದ ಇತಿಹಾಸದಲ್ಲಿ ಅಂಥವರು ಒಬ್ಬಿಬ್ಬರು ಹುಟ್ಟಿ ಬಂದರೆ ದೇಶದ ದೊಡ್ಡ ಪುಣ್ಯ.

ಗುರುಕರುಣದಿಂದಲೆ ಹರಿಚರಣದ ಒಲವು ಮೂಡೀತು. 'ಮುಕುಂದ ಭಕ್ತ್ಯೈ ಗುರುಭಕ್ತಿಜಾಯ್ಯೈ' ಎಂಬ ಒಂದು ಮಾತು ಇದೆ. ಗುರುಭಕ್ತಿ ಇದ್ದವನಿಗೆ ಮಾತ್ರವೆ ದೇವರಲ್ಲಿ ಭಕ್ತಿ ಮೂಡೀತು. ದೇವರು ಮುನಿದರೆ ಗುರು ಸಲಹಿಯಾನು. ಆದರೆ ಗುರು ಮುನಿದರೆ ಯಾರೂ ಸಲಹುವಂತಿಲ್ಲ. ಹರೌ ರುಷ್ಟೇ ಗುರುಸ್ತ್ರಾತಾ ಗುರೌ ರುಷ್ಟೇ ನ ಕಶ್ಚನ. ಅದಕ್ಕೆಂದೇ ದಾಸರು ಹಾಡಿದರು:

ಗುರುವಿನ ಗುಲಾಮನಾಗುವ ತನಕ
ದೊರೆಯದಣ್ಣ ಮುಕುತಿ

ಆಧ್ಯಾತ್ಮದ ತತ್ವ ಲ್ಯಾಬೊರೆಟರಿಗಳಲ್ಲಿ ಪ್ರಯೋಗ ನಡೆಸಿ ತಿಳಿಯು ವಂಥದಲ್ಲ. ಕಾಲೇಜಿನ ಕ್ವಾಲಿಫಿಕೇಶನುಗಳಿಂದ ಪಡೆಯುವಂಥದಲ್ಲ. ವೇದಿಕೆಯ ಮೇಲಣ ಉಪನ್ಯಾಸಗಳಿಂದ, ವಾದ ವಿವಾದಗಳಿಂದ, ಉತ್ಸವ ಸಮ್ಮೇಳನಗಳಿಂದ ಅರಿಯಬರುವಂಥದಲ್ಲ. ಅದನ್ನು ತಿಳಿಯಲು ಒಳಗಣ್ಣು

ತೆರೆಯಬೇಕು. ಆದರೆ ಈ ಒಂದು ಮೂರನೆಯ ಒಳಗಣ್ಣು ಇದೆಯೆನ್ನುವು ದನ್ನೇ ನಾವು ಮರೆತಿದ್ದೇವೆ. ಈಗ ತಾನೆ ತಾಯಿ ಹೊಟ್ಟೆಯಿಂದ ಹೊರ ಬಂದ ಬೆಕ್ಕಿನ ಮರಿಯಂತೆ ನಾವು ಕುರುಡರಾಗಿ ಬಾಳುತಿದ್ದೇವೆ. ಕಣ್ಣು ಒಡೆದು ನೋಡುವ ಶಕ್ತಿ ಬರುವ ತನಕ ಮೊಲೆಯೂಡಿ ದಾರಿ ತೋರುವ ತಾಯಿ ಬೆಕ್ಕಿನ ಆಸರೆ ಬೇಕೆ ಬೇಕು. ಅಂಥ ಮಾರ್ಗದರ್ಶಕನೆ ಗುರು. ಅಂಥ ಗುರುಕರುಣೆ ಒಳಗಣ್ಣನ್ನು ತೆರೆಯಿಸಿದಾಗ ಮಾನವ ಮುಕ್ಕಣ್ಣನಾಗು ತ್ತಾನೆ. ಆ ಕಣ್ಣಿನ ದರ್ಶನವೆಲ್ಲ ಆನಂದಮಯ. ಅದರಿಂದ ಶಾಸ್ತ್ರ ಹೇಳು ತ್ತಿದೆ: 'ಅರ್ಚನೀಯೋ ಗುರುಃ ಸದಾ.'

ಬೆಳಕು ಹೊರಗಿನಿಂದ ಆಮದು ಮಾಡಿ ತರುವ ವಸ್ತು ಅಲ್ಲ. ಬೆಳಕಿನ ಬುರುಡೆ ಒಳಗೆಯೆ ಇದೆ. ಆದರೆ ನಾವು ಈ ಛತ್ರದಲ್ಲಿ ಹೊಸದಾಗಿ ಬಿಡಾರ ಬಂದವರು. ದೀಪದ ಸ್ವಿಚ್ ಎಲ್ಲಿದೆ ಎನ್ನುವುದು ನಮಗೆ ಗೊತ್ತಿಲ್ಲ. ಅದಕ್ಕೆ ನಮಗೆ ಯಜಮಾನನ ನೆರವು ಬೇಕು. ಸ್ವಿಚ್ ಒತ್ತಿಬಿಟ್ಟೆವೆಂದರೆ ಮತ್ತೆ ಮನೆ ತುಂಬ, ಮನ ತುಂಬ ಬೆಳಕೇ ಬೆಳಕು. ಸೂರ್ಯ ಕಂತಿದರೂ ಇಲ್ಲಿ ಕತ್ತಲು ಸುಳಿಯುವುದಿಲ್ಲ. ಇಷ್ಟಕ್ಕಾಗಿ ನಮಗೆ ಒಬ್ಬ ಗೈಡ್, ಒಬ್ಬ ಗುರು ಬೇಕು.

ಹಿರಿಯರೊಬ್ಬರು ಹೀಗೆ ಹೇಳಿದ್ದುಂಟು: ನಮ್ಮ ಉಗ್ರಾಣದಲ್ಲಿ ಅಡಿಗೆಗೆ ಬೇಕಾದ ಸಾಮಾನುಗಳೆಲ್ಲ ಸಿದ್ಧ ಇವೆ. ಪಾತ್ರೆ–ಪರಡಿ ಮನೆಯಲ್ಲೆ ಉಂಟು. ಅಕ್ಕಿ ಸಂಗ್ರಹ ಇದೆ. ಕಾಯಿಪಲ್ಲೆ ತಂದದ್ದುಂಟು. ಕಾಲು ಬೇಳೆಗೆ ಕಮ್ಮಿ ಇಲ್ಲ. ಎಲ್ಲ ಸಿದ್ಧ ಇದೆ. ನಮಗೆ ಹಸಿವೂ ಆಗಿದೆ. ಆದರೆ ಅಡಿಗೆ ಮಾಡುವವರಿಲ್ಲ. ನಮಗೆ ಉಣ್ಣುವುದಷ್ಟೆ ಗೊತ್ತು: ಅಡಿಗೆ ಮಾಡಿ ಗೊತ್ತಿಲ್ಲ. ಹೀಗಿದೆ ನಮ್ಮ ಅಂತರಂಗದ ಸ್ಥಿತಿ. ತತ್ವದ ತಿಳಿವಿಗೆ ಬೇಕಾದ ಎಲ್ಲ ಸಾಧನವೂ ನಮ್ಮೊಳಗೆಯೆ ಇದೆ. ತತ್ವದ ತಿಳಿವಿಗಾಗಿ ನಾವು ಹಸಿದಿ ದ್ದೇವೆ ಕೂಡ. ಆದರೆ ಅಟ್ಟು ಬಡಿಸುವವರು ಯಾರು? ಒಬ್ಬ ನುರಿತ ಅಡಿಗೆಯ ಭಟ್ಟ ಬೇಕಾಗಿದ್ದಾನೆ.

ಅಡಿಗೆ ಮಾಡುವ ಕಲೆ ವ್ಯಾಸರಾಯರಿಗೆ ತಿಳಿದಿತ್ತು. ಎಂತಲೇ ಹಸಿದಿದ್ದ ಪುರಂದರದಾಸರು ಅವರನ್ನು ಗುರುವಾಗಿ ವರಿಸಿದರು. ವಾಸ್ತವವಾಗಿ ವ್ಯಾಸರಾಯ–ಪುರಂದರದಾಸ ಇಬ್ಬರೂ ಸ್ವಯಂಪಾಕಿಗಳೆ. ಆದರೆ ವ್ಯವ

ಹಾರಕ್ಕಾಗಿ ಒಬ್ಬರು ಗುರು ಒಬ್ಬರು ಶಿಷ್ಯ ಆಗಿ ಉಳಿದ ಸಾಧಕವರ್ಗಕ್ಕೆ ಇಬ್ಬರೂ ಗುರುಗಳಾಗಿ ನಡೆದುಕೊಂಡರು.

ಸಿಕ್ಕಿದರೆ ವ್ಯಾಸರಾಯರಂಥ ಗುರುಗಳು ಸಿಗಬೇಕು. ಅವರ ಅನುಗ್ರಹ ದಿಂದ ನನ್ನ ಕುಲ ಪಾವನವಾಯಿತು. ಹರಿಚರಣದ ಭಜನೆಗೆ ಅಧಿಕಾರಿ ನಾನಾದೆ. ಅವರಿತ್ತ ಮಂತ್ರೋಪದೇಶದಿಂದ ನಾನು ಸಿದ್ಧಿ ಪಡೆದೆ. ಅವರಿತ್ತ ಅಂಕಿತದಿಂದ ನಾನು ಪುರಂದರವಿಠಲನನ್ನು ಒಲಿಸಿಕೊಂಡೆ', ಎಂದು ಪುರಂದರ ದಾಸರು ತನ್ನ ಗುರುವಿನ ಹೆಗ್ಗಳಿಕೆಯನ್ನು ಬಲು ಹೆಮ್ಮೆಯಿಂದ ಹಾಡಿ ಹೊಗಳಿದ್ದಾರೆ:

ವ್ಯಾಸರಾಯರ ಚರಣಕಮಲ ದರುಶನವೆನಗೆ
ಏಸು ಜನ್ಮದ ಸುಕೃತ ಫಲದಿ ದೊರಕಿತೋ ಎನ್ನ
ಸಾಸಿರ ಕುಲಕೋಟಿ ಪಾವನವಾಯಿತು
[ಶ್ರೀಶನ ಭಜಿಸುವೊಡಧಿಕಾರಿ ನಾನಾದೆ

*    *    *

ವರಮಹಾಮಂತ್ರ ಉಪದೇಶಿತನಾಗಿ
ಪುರಂದರವಿಠಲ ಪರನೆಂದೆನಿಸಿ
ದುರಿತ ಭಯಗಳನೆಲ್ಲ ಪರಿಹರಿಸಿದನಾಗಿ...

*    *    *

ಪಂಕಜನಾಭ ಪುರಂದರವಿಠಲನ್ನ
ಅಂಕಿತವೆನಗಿತ್ತ ಗುರು ವ್ಯಾಸಮುನಿರಾಯ

ಇದು ಒಂದು ವಿಚಿತ್ರವಾದ ಗುರುಶಿಷ್ಯ ಭಾವ. ಇಲ್ಲಿ ಶಿಷ್ಯ ಗುರು ವನ್ನು ಹೊಗಳಿದಂತೆಯೆ ಗುರು ಕೂಡ ಶಿಷ್ಯನನ್ನು ಮುಕ್ತಕಂಠದಿಂದ ಹೊಗಳಿದ್ದಾರೆ. ವ್ಯಾಸರಾಯರು ವಾದಮಲ್ಲರನ್ನೆಲ್ಲ ಗೆಲಿದ ಅಪ್ರತಿಮ ತಾರ್ಕಿಕನಾದರೂ ಅವರ ಒಲವು ವಾದದಲ್ಲಿ ಇರಲಿಲ್ಲ. ಭಕ್ತಿ ಪಂಥದಲ್ಲಿತ್ತು. ದಾಸಪಂಥದಲ್ಲಿತ್ತು. ನರಹರಿತೀರ್ಥರು ದಾಸಪಂಥದ ಆದ್ಯಾಚಾರ್ಯರಾದರೂ ಕರ್ನಾಟಕದ ಬಯಲಿನಲ್ಲೆಲ್ಲ ದಾಸಪಂಥದ ಸಸಿಯನ್ನು ನೆಟ್ಟು ನೀರೆರೆದವರು ವ್ಯಾಸರಾಯರು. ಅವರ ಅಗ್ರ ಶಿಷ್ಯ ಪುರಂದರದಾಸರು ಈ ಕೆಲಸವನ್ನು ಸಫಲವಾಗಿ ಸಾಧಿಸಿದರು. ವಾದ ಮಾಡುವ ಬರಡು ಪಂಡಿತರಲ್ಲಿರದ ಒಂದು

ದೈವೀಶಕ್ತಿಯನ್ನು, ಒಂದು ಪುಣ್ಯ ಚೇತನವನ್ನು ವ್ಯಾಸರಾಯರು ದಾಸರಲ್ಲಿ ಕಂಡಿದ್ದರು. ಎಂದೇ ಅವರು ದಾಸರನ್ನು ಶಿಷ್ಯತ್ವದ ಎಲ್ಲೆಯನ್ನೂ ಮೀರಿ ಹೊಗಳಿದರು. ತತ್ವ ದೃಷ್ಟಿಯ ಮುಂದೆ ವ್ಯವಹಾರದ ಮಾತು ತಡೆಯಾಗಿ ನಿಲ್ಲುವುದಿಲ್ಲ.

ತಮ್ಮ ಸಮಕಾಲದ ಶುಷ್ಕ ಪಂಡಿತರ ಬಗೆಗೆ ವ್ಯಾಸರಿಗು — ದಾಸರಿಗು ಜತೆಯಾಗಿಯೆ ತಿರಸ್ಕಾರವಿತ್ತು. 'ಪಿಂಡಾಂಡದೊಳಗಿನ ಗಂಡನ ಕಾಣದೆ ಮುಂಡೆಯರಾದರು ಪಂಡಿತರು' ಎಂದು ನಗೆಯಾಡಿದ್ದಾರೆ ದಾಸರು. ಭಗವಂತ ಜ್ಞಾನಿಗಳ ಗಂಡ. ಅವನನ್ನು ಕಳೆದುಕೊಂಡ ಈ ಪಂಡಿತರು ದಾಸರ ಕಣ್ಣಿಗೆ ವಿಧವೆಯಂತೆ ಕಂಡರು. ಅವರ ಮುಂದಿನ ಮಾತು: 'ವಾದಿಸಿ ಸಭೆಯೊಳು ಒಂದನು ತಿಳಿಯದೆ', ಈ ಪಂಡಿತರಿಗೆ ಏನೂ ತಿಳಿದಿಲ್ಲ. ಆದರೆ ಸಭೆಯಲ್ಲಿ ಅವರ ವಾದದ ಗೌಜಿ ನೋಡದರೆ ಬೇಡ. ಎಲ್ಲ ಹೊರಗಣ್ಣಿನ ಆಡಂಬರ. ಒಳಗಣ್ಣು ಇನ್ನೂ ಮುಚ್ಚಿಕೊಂಡೇ ಇದೆ. ಕುರುಡರದೇ ಸಾಮ್ರಾಜ್ಯ ನಡೆದಿದೆ. 'ಅಂಧೇನೈವ ನೀಯಮಾನಾ ಯಥಾಂಧಾಃ' ಎನ್ನುವ ಉಪನಿಷತ್ತಿನ ಧ್ವನಿಯು ಇದೇ. 'ಅಂತರಂಗದಲಿ ಹರಿಯ ಕಾಣದವ ಹುಟ್ಟು ಕುರುಡ' ಎಂದು ವ್ಯಾಸರಾಯರು ಹಾಡಿದ್ದೂ ಇದನ್ನೇ.

ವ್ಯಾಸರಾಯರಿಗೆ ಮಾತ್ರವಲ್ಲ, ವೇದವ್ಯಾಸರಿಗೇ ಈ ಪಂಡಿತರನ್ನು ಕಂಡರೆ ಆಗದು. ಅವರು ಇಂಥ ಪಂಡಿತರ ಕುರಿತು ಒಂದು ಪುರಾಣದಲ್ಲಿ ಎಂಥ ಉಗ್ರವಾದ ಬಾಣವನ್ನೆಸೆದಿದ್ದಾರೆ ನೋಡಿ:

> ಪಂಡಿತಾಸ್ತು ಕಲತ್ರೇಣ ರಮಂತೇ ಮಹಿಷಾ ಇವ ।
> ಪುತ್ರಸ್ಯೋತ್ಪಾದನೇ ದಕ್ಷಾ ಅದಕ್ಷಾ ಮೋಕ್ಷಸಾಧನೇ ॥

"ಹೆಣ್ಣುಗಳೊಡನೆ ಲಲ್ಲೆಯಾಡಲು ಮಾತ್ರ ಬಲ್ಲ ಈ ಪಂಡಿತರನ್ನು ಕೋಣಗಳ ಸಾಲಿಗೆ ಸೇರಿಸಬೇಕು. ಅವರಿಗೆ ಏನು ತಿಳಿದಿದೆ? ಮಕ್ಕಳು ಮಾಡಲು ತಿಳಿದಿದ್ದೀತು. ಆದರೆ ದೇವರನ್ನು ಹಾಡಲು ತಿಳಿದಿಲ್ಲ!"

ಈ ದೃಷ್ಟಿಯಲ್ಲಿ ವ್ಯಾಸರಾಯರಿಗೆ ಪುರಂದರದಾಸರಷ್ಟು ಪ್ರಿಯನಾದ ಶಿಷ್ಯ ಬೇರಿಲ್ಲ. ದಾಸರೆಂದರೆ ಪುರಂದರದಾಸರೇ ಸರಿ ಎನ್ನುವ ಸಿದ್ಧಾಂತಕ್ಕೆ ಅವರು ಬಂದರು. ಈ ಗುರು—ಈ ಶಿಷ್ಯ ಪರಸ್ಪರ ಹೊಗಳಿಕೊಳ್ಳುವುದೇ ಒಂದು

ಸೊಗಸು. ಉಳಿದವರಿಗೆ ಹೊಗಳುವುದಕ್ಕಾದರೂ ಏನು ತಿಳಿದಿದೆ. ಪುರಂದರ ದಾಸರ ಎತ್ತರವನ್ನು ತೂಗಿ ಹೇಳಬಲ್ಲವರು ಯಾರಾದರೂ ಇದ್ದರೆ ಅದು ವ್ಯಾಸರಾಯರು. ದಾಸರ ವ್ಯಕ್ತಿತ್ವದ ಸ್ಪಷ್ಟ ಚಿತ್ರ ನಮಗೆ ಬೇಕಾದರೆ ಅವರ ಬಗೆಗೆ ವ್ಯಾಸರಾಯರ ಉದ್ಗಾರಗಳನ್ನೆಲ್ಲ ನಾವು ಮನನ ಮಾಡಬೇಕು. ವ್ಯಾಸರಾಯರ ಕೆಲವು ನುಡಿಮುತ್ತುಗಳು ಇಲ್ಲಿವೆ:

ದಾಸರೆಂದರೆ ಪುರಂದರದಾಸರಯ್ಯ

ಡಂಭದಿಂ ಹರಿಸ್ಮರಣೆ ಮಾಡಿ ಜನರ ಮುಂದೆ
ಸಂಭ್ರಮದಿ ತಾನುಂಬ ಊಟ ಬಯಸಿ
ಅಂಬುಜೋದ್ಭವಪಿತನ ಆಗಮಗಳರಿಯದೆ
ತಂಬೂರಿ ಮೀಟಿದವ ಹರಿದಾಸನೆ ?

ನೀತಿಯೆಲ್ಲವನರಿತು ನಿಗಮವೇದ್ಯನ ನಿತ್ಯ
ಮಾತುಮಾತಿಗೆ ಬಿಡದೆ ವರ್ಣಿಸುತಲಿ
ಗೀತ ನರ್ತನದಿ ಶ್ರೀಕೃಷ್ಣನ್ನ ಪೂಜಿಸುವ
ಪೂತಾತ್ಮ ದಾಸ ಪುರಂದರದಾಸರಯ್ಯ

* * *

ಕಂಗಳಿಗೆ ಹಬ್ಬವಾಯಿತಯ್ಯ
ಮಂಗಳಾತ್ಮಕ ಪುರಂದರದಾಸರ ಕಂಡು

ನಿಖಿಲ ಫಲಗಳು ಇಲ್ಲಿ ತತ್ಕಾಲದಲಿ ಬಂತು
ರುಕುಮಿಣೀಪ್ರಿಯನ ಪಾದಾರವಿಂದವ ಹೃದಯ
ಸುಕಮಲದೊಳಗಿಟ್ಟು ಪ್ರತಿದಿನವು ಪೂಜಿಸುವ
ಭಕುತರಾಯನ ನೋಡಿದಾಕ್ಷಣ ಪಡೆದೆ ನಾ

ಪನ್ನಗಶಾಯಿ ಶ್ರೀಕೃಷ್ಣನ್ನ ದಾಸರ
ಸನ್ಮಹಿಮೆಗಳನ್ನು ಸ್ತುತಿಸಿ ಪಾವನನಾದೆ !

ಪುರಂದರದಾಸರ ಸಂಗದಿಂದ ತಾನು ಪಾವನನಾದೆ ಎನ್ನಬೇಕಾದರೆ ದಾಸರಮೇಲೆ ವ್ಯಾಸರಾಯರಿಗೆ ಎಂಥ ಗೌರವ ಇರಬೇಡ. ಹೀಗೆ ಗುರುವಿನಿಂದ 'ಮಾನಪತ್ರ' ಪಡೆದ ಈ ಶಿಷ್ಯನ ಗುರುಭಕ್ತಿ, ದೈವೀಭಕ್ತಿ ಎರಡೂ

ಪರಿಪೂರ್ಣ. ಆದರಿಂದಲೆ ಆವರಿಗೆ ಆಂಥ ಅಂತರ್ದೃಷ್ಟಿ ಸಾಧಿಸಿತು; ಭಗವಂತನ ದರ್ಶನದ ಯೋಗ ದೊರಕಿತು. ಉಪನಿಷತ್ತಿನ ಮಾತು ನೋಡಿ :

ಯಸ್ಯ ದೇವೇ ಪರಾ ಭಕ್ತಿಃ ಯಥಾ ದೇವೇ ತಥಾ ಗುರೌ ।
ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ ॥

ದೇವರಲ್ಲಿ, ಗುರುವಿನಲ್ಲಿ ಪರಮಭಕ್ತಿಯನ್ನು ತೋರುವಂಥ ಮಹಾತ್ಮನ ಕಣ್ಣ ಮುಂದೆ ಉಪನಿಷತ್ತಿನ ರಹಸ್ಯವೆಲ್ಲ ಕುಣಿಯುವುದು. ಪುರಂದರದಾಸರ ಕಣ್ಣ ಮುಂದೆ ಇಂಥ ರಹಸ್ಯ ಕುಣಿದಿತ್ತು. ಭಗವಂತನೆ ಒಲಿದು ಆವರ ಕಣ್ಣ ಮುಂದೆ ಕುಣಿದಿದ್ದನೆಂದ ಮೇಲೆ ಉಳಿದ ಮಾತೇನು?

## ತದೇವ ಲಗ್ನಂ ಸುದಿನಂ ತದೇವ

ಗುರುವನ್ನು ಒಲಿಸಿಕೊಂಡ ದಾಸರಿಗೆ ಹರಿ ಕೂಡ ಒಲಿದ. ಆಷ್ಟರ ತನಕದ ಆವರ ಲೌಕಿಕ ಉದ್ಗಾರಗಳೆಲ್ಲ ಮಾಯವಾಗಿ ಆವರ ಮಾತು ಕೇವಲ ಭಗವನ್ಮಯವಾಯಿತು. ತನಗೆ ಭಗವದ್ದರ್ಶನದ ಪ್ರಥಮಾನುಭವವಾದಾಗ ಆವರು ಮೈಮರೆತು ಹೀಗೆ ಹಾಡಿದರು :

ಇಂದಿನ ದಿನವೇ ಶುಭ ದಿನವು
ಇಂದಿನ ವಾರ ಶುಭವಾರ
ಇಂದಿನ ತಾರೆ ಶುಭತಾರೆ
ಇಂದಿನ ಯೋಗ ಶುಭಯೋಗ
ಇಂದಿನ ಕರಣ ಶುಭಕರಣ
ಇಂದು ಪುರಂದರವಿಟ್ಠಲರಾಯನ
ಸಂದರುಶನ ಫಲವೆನಗಾಯ್ತು
ಸಂದರುಶನ ಫಲವೆನಗಾಯ್ತು

ಅಂದಿನಿಂದ ದಾಸರ ಕಾಯ–ವಾಕ್–ಚಿತ್ತ ಎಲ್ಲ ಭಗವನ್ಮಯವಾಯಿತು; ಆವರ ವ್ಯಾಪಾರವೆಲ್ಲ ಆನಂದಮಯವಾಯಿತು :

ಮನೋ ವಚನಗಳಲ್ಲಿ
ಕಾಯ ಕರ್ಮಗಳಲ್ಲಿ
ನೀನೇ ನೀನೇ ನೀನೇ ಪುರಂದರವಿಠಲ

ದಾಸರು ಭಗವಂತನನ್ನು ತನ್ನ ಮನಃಪಂಜರದಲ್ಲಿ ಬಂಧಿಸಿಬಿಟ್ಟರು. ಇನ್ನು ಅವರಿಗೆ ಯಾವುದರ ಗೋಜೂ ಇಲ್ಲ; ಸರ್ವಗತನಾದ ಭಗವಂತ ಅವರ ಹೃದಯದಲ್ಲಿ ಮಿನುಗುತ್ತಿದ್ದಾನೆ:

ಜಗವ ಸುತ್ತಿಹುದೆಲ್ಲ ನಿನ್ನ ಮಾಯೆಯಯ್ಯ
ನಿನ್ನ ಸುತ್ತಿಹುದೆಲ್ಲ ಎನ್ನ ಮನವಯ್ಯ
ಜಗಕೆ ಬಲ್ಲಿದ ನೀನು ನಿನಗೆ ಬಲ್ಲಿದ ನಾನು
ಮೂರು ಜಗ ನಿನ್ನೊಳಗೆ ನೀನು ಎನ್ನೊಳಗೆ
ಕರಿಯು ಕನ್ನಡಿಯಲ್ಲಿ ಅಡಗಿಪ್ಪ ತೆರನಂತೆ
ಎನ್ನೊಳು ಅಡಗಿದೆಯೊ ಪುರಂದರವಿಠಲ

ಭಗವಂತ ಭಕ್ತರ ಅಧೀನ. ಭಕ್ತರಿಗೆ ಭಗವಂತನೆಂದರೆ ಅಂಥ ಸಲಿಗೆ. ದಾಸರ ಎಚ್ಚರ–ನಿದ್ರೆ ಎರಡೂ ಭಗವನ್ಮಯವಾಯಿತು. ಅವರು ಕನಸಿನಲ್ಲು ಕಾಣುತ್ತಿದ್ದದ್ದು ಒಂದೇ: ಭಗವದ್ರೂಪ. ಭಗವಂತನ ಹುಚ್ಚು ಹಿಡಿದಮೇಲೆ ದಾಸರಿಗೆ ಹೊತ್ತು–ಗೊತ್ತು ಏನೂ ಇಲ್ಲ. ರಾತ್ರಿ ಎಲ್ಲ ಎಚ್ಚರಿದ್ದಾರು. ಬೆಳಗಾದ ಮೇಲೂ ಮಲಗಿಕೊಂಡಾರು. ಸ್ನಾನದ ಹೊತ್ತಾಯಿತು, ನೇಮಕ್ಕೆ ಭಂಗ ಬಂದೀತು ಎಂದು ಮುಂಜಾನೆ ಯಾರಾದರೂ ಬಂದು ಎಬ್ಬಿಸಿದರೆ ದಾಸರ ಉದ್ಗಾರವೇ ಬೇರೆ: 'ಯಾಕೆನ್ನ ಎಬ್ಬಿಸಿದೆ? ಶ್ರೀಹರಿಯ ಸೇವೆ ಧ್ಯಾನದೊಳಗಿದ್ದೆ ನಾನು'.

ಹರಿ ಸೇವೆ ಎಚ್ಚರದಲ್ಲಿ ಮಾತ್ರ ಅಲ್ಲ. ನಿದ್ರೆಯಲ್ಲಿ ಕೂಡ. ಒಳಗಣ್ಣಿಗೆ ನಿದ್ರೆಯೆಂಬುದು ಗೊತ್ತಿಲ್ಲ. ಅವರ ಕನಸಿನಲ್ಲಿ ಕೂಡ ಕಾಳೀಯ ಕೃಷ್ಣನಾಗಲಿ, ತಿರುಪತಿಯ ತಿಮ್ಮಪ್ಪನಾಗಲಿ ಕಾಣಿಸಬಹುದು ಹೊರತು ಬೇರೇನೂ ಕಾಣಿಸುವಂತಿಲ್ಲ.

ಕಂಡೆ ನಾ ಕನಸಿನಲಿ ಗೋವಿಂದನ
ಕಂಡೆ ನಾ ಕನಸಿನಲಿ ಕನಕರತ್ನದ ಮಣಿಯ
ನಂದನ ಕಂದ ಮುಕುಂದನ ಚರಣವ
ಅಂದುಗೆ ಕಿರುಗೆಜ್ಜೆ ಘಲಿರೆಂಬ ವಾದ್ಯದಿ
ಬಂದು ಕಾಳಿಂಗನ ಹೆಡೆಯನೇರಿ
ಧಿಂ ಧಿಮಿ ಧಿಮಿಕೆಂದು ತಾಳಗತಿಗಳಿಂದಾ-

ನಂದದಿ ಕುಣಿವ ಮುಕುಂದನ ಚರಣವ
ಕಂಡೆ ನಾ ಕನಸಿನಲಿ—

* * *

ಕನಸು ಕಂಡೆನೆ ಮನದಲ್ಲಿ ಕಳವಳಗೊಂಡೆನೆ
ಏನು ಹೇಳಲಿ ತಂಗಿ ತಿಮ್ಮಯ್ಯನ ಪಾದವನು ಕಂಡೆ

ಇಲ್ಲಿ ನಾವು ಗಮನಿಸಬೇಕಾದ ಒಂದು ಅಂಶ ಇದೆ. ಕನಸು ಎಂದರೆ ನಾವು ಕಾಣುವಂಥ ಕನಸಲ್ಲ ಇದು. ಭಗವದ್ದರ್ಶನದ ಸಮಾಧಿಯೇ ಒಂದು ನಿದ್ರೆ. 'ಸಾ ನಿಶಾ ಪಶ್ಯತೋ ಮುನೇಃ' ಒಳಗಣ್ಣಿನ ನೋಟವೇ ಒಂದು ಕನಸು. ಆದರಿಂದ 'ಕನಸು' ಭಗವಂತನ ಮಾನಸ ಸಾಕ್ಷಾತ್ಕಾರದ ಒಂದು ಆವಿಷ್ಕಾರ ಹೊರತು ಜಾಗ್ರದಾದಿ ಅವಸ್ಥೆಗಳಲ್ಲಿ ಸೇರಿದ ಬರಿದೆ ಕನಸಲ್ಲ ಇದು. ಈ ಹಾಡಿನ ಕೊನೆಯ ಚರಣದಿಂದ ಈ ಮಾತು ಸ್ಪಷ್ಟವಾಗುವುದು; 'ಎನ್ನ ಹೃದಯಮಂಟಪದಲ್ಲಿ ಪುರಂದರವಿಠಲನ ಕೂಡಿದೆನೇ'. ಅವರ ಕನಸಿನ ಸ್ಪಷ್ಟ ವ್ಯಾಖ್ಯೆ ಈ ಮಾತಿನಲ್ಲಿ ಬಂದಿದೆಯಲ್ಲಿ?

ದಾಸರು ಭಾರತದ ಎಲ್ಲ ತೀರ್ಥಕ್ಷೇತ್ರಗಳನ್ನೂ ಬಿಡದೆ ಸಂಚರಿಸಿದವರು ಎಲ್ಲೆಡೆಯ ದೇವರಿಗೂ ಎರಗಿ ಹರಕೆ ಪಡೆದವರು. ಆದರೆ ಆಯಾ ಕ್ಷೇತ್ರಗಳಲ್ಲಿ ಅವರು ಕೂಡ ನೋಟ ಬೇರೆ. ಉಳಿದವರಿಗೆ ಕಾಣುವ ನೋಟ ಬೇರೆ. ಉಳಿದವರು ಯಾತ್ರೆಗೆ ಹೋಗುತ್ತಾರೆ. ವಿಗ್ರಹವನ್ನು ಕಾಣುತ್ತಾರೆ. ವಿಗ್ರಹವನ್ನು ಕಡೆದ ಶಿಲ್ಪಿಯ ಕೈಚಳಕವನ್ನು ಹೊಗಳಿ ಹಿಂತಿರಳುತ್ತಾರೆ. ಆದರೆ ದಾಸರಿಗೆ ವಿಗ್ರಹದ ದರ್ಶನವಷ್ಟೇ ಅಲ್ಲ. ದಿವ್ಯ ವಿಗ್ರಹ ದರ್ಶನ. ಅವರು ಬರಿದೆ ಕಲ್ಲಿಗೆ ಕೈಮುಗಿದು ಬರುತ್ತಿರಲಿಲ್ಲ. ಅವರು ಅಂತರಂಗದಲ್ಲಿ ಕಾಣುತ್ತಿದ್ದ ಕನಸು ವಿಗ್ರಹದ ಮುಂದೆ ಸಾಕಾರವಾಗುತ್ತಿತ್ತು.

ದಾಸರಿಗೆ ಹೆಚ್ಚು ಪ್ರಿಯವಾದ ಕ್ಷೇತ್ರಗಳು ಎರಡು: ಉಡುಪಿ ಮತ್ತು ತಿರುಪತಿ. ಈ ಎರಡು ಕ್ಷೇತ್ರಗಳಲ್ಲಿ ಅವರು ಭಗವಂತನನ್ನು ಕಂಡ ಬಗೆಯನ್ನು ನೋಡೋಣ. ತಿರುಪತಿಯ ಶ್ರೀನಿವಾಸನ ದಿವ್ಯ ದರ್ಶನ ಒಮ್ಮೆ ಅವರಿಗಾಯಿತಂತೆ:

ನಿನ್ನ ದಿವ್ಯ ಮೂರುತಿಯ ಕಣ್ಣು ದಣಿಯ ನೋಡಿ
ಧನ್ಯನಾದೆನೊ ಧರೆಯೊಳು

ಇನ್ನು ಈ ಭವಭಯಕೆ ಅಂಜಲೇತಕೊ
ಚೆನ್ನ ಸಿರಿ ವೆಂಕಟೇಶ ಶ್ರೀಶ

ಇನ್ನೊಂದು ಹಾಡು :

ಶ್ರೀನಿವಾಸನು ಬಂದ ಕೋನೇರಿ ತಿಮ್ಮಪ್ಪ
ಪಾಣಿಯರಸನಯ್ಯನು
ವೇಣುಗಾನಲೋಲ ಮೋಸಮಾಡಲು ಬಂದ
ದೀನರಕ್ಷಕನಯ್ಯ ಮೋಹನಕೃಷ್ಣ
ಪತಿತಪಾವನ ಬಂದ ಸಚ್ಚಿದಾನಂದನು
ಹಿತಕರನು ಬಂದ ನಿಖಿಲವೇದ
ಪ್ರತಿಪಾದ್ಯನು ಬಂದ ಹಿಗ್ಗುತಲಿ ನಿಂದ
ಮತಿಗೆಡಿಸಿ ಪೋದನಯ್ಯ ಮುದ್ದು ರಂಗಯ್ಯ

ಉಡುಪಿ ಕೃಷ್ಣನೂ ಹೀಗೇಯೇ ಅವರಿಗೆ ಕಾಣಿಸಿ ಕಣ್ಣು ತಪ್ಪಿಸಿಕೊಂಡ ನಂತರ :

ಉಡುಪಿನಿಲಯ ಬಂದ ಉಡುಪನಂತೊಳಿಯುತ
ತಟಿಯಂತೆ ಮರೆಯಾದ ಕಾಣಬಾರದ ವಸ್ತು
ಉಟ್ಟದ್ದು ತೊಟ್ಟದ್ದು ಇಟ್ಟದ್ದು ನೋಡಲು
ಅಷ್ಟು ಮಾಯವಯ್ಯ ಬಲು ಮಾಯವಯ್ಯ
ಏಸು ಹರುಷವೋ, ಏಸು ಕರುಣವೋ
ಕಾಸು ಬಾರದ ಏನ್ಮಾಲೆ ಮುದ್ದು ಕೃಷ್ಣಯ್ಯಗೆ

ತಾನು ಸಂಪತ್ತನ್ನೆಲ್ಲ ತೊರೆದು ಬಂದವನು. ತಂಬೂರಿಯೊಂದೆ ತನ್ನ ಸಂಪತ್ತು. ಇಂಥ ತನ್ನ ಮೇಲೆ ದೇವರು ಎಂಥ ಕರುಣೆ ತೋರುತ್ತಿದ್ದಾನೆ! ಏನು ದಯಾಮಯನೀತ ಎಂದು ದಾಸರು ಅಚ್ಚರಿಗೊಳ್ಳುತ್ತಾರೆ. ಭಗವಂತನ ಅಪಾರವಾದ ಕರುಣೆಯ ಸವಿಯನ್ನು ಕಂಡೂ ಅಚ್ಚರಿಪಡದವರುಂಟೆ?

ಉಡುಪಿಗೆ ಬಂದಾಗ ದಾಸರು ಹಲವು ಹಾಡುಗಳನ್ನು ಹಾಡಿದ್ದಾರೆ. ಅದರಲ್ಲಿ ಬಲು ಮಹತ್ತ್ವದ ಹಾಡು ಒಂದಿದೆ. ಅದರ ಪೂರ್ತಿ ಪಾಠ ಇದು :

ಕಂಡೆ ನಾ ಉಡುಪಿಯ ಕೃಷ್ಣರಾಯನ್ನ
ಭೂಮಂಡಲದೊಳಗೆ ಉದ್ದಂಡ ಮೋಹಿಪನ

ಸಮುದ್ರವ ನಾ ಕಂಡು ಸ್ನಾನಾದಿಗಳ ಮಾಡಿ
ಚಂದ್ರ ಮೌಳೀಶ್ವರನ ಚರಣಕೆರಗಿ
ಆ ಮೇಲೆ ನಾ ಬಂದು ಅನಂತೇಶ್ವರನ ಕಂಡು
ಹನುಮಂತನ ಪಾಡಿ ಮನದಿ ನಿಲಿಸಿ

ಸುತ್ತು ನದಿಯು ಕಂಡೆ ಸೂರ್ಯನ ಪ್ರಭೆ ಕಂಡೆ
ಅಲ್ಲಿದ್ದ ಮಧ್ವಸರೋವರವ ಕಂಡೆ
ಮಧ್ವಮತದ ಅಷ್ಟಮುನಿಗಳ ಕಂಡೆ
ಪ್ರಸಿದವಾಗಿರುವ ಉಡುಪಿಯು ಕೃಷ್ಣನ ಕಂಡೆ

ಉಂಗುರ ಉಡಿದಾರ ಉಡಿಘಂಟೆ ನಾ ಕಂಡೆ
ರಂಗಮಾಣಿಕದ ನವರತ್ನ ಮಾಲೆ ಕಂಡೆ
ಧಿಂ ಧಿಂ ಧಿಮಿಕೆಂದು ಕುಣಿವ ಕಷ್ಣನ ಕಂಡೆ
ಪುರಂದರವಿಠಲನ ಪಾದಕಮಲವ ಕಂಡೆ

ಒಬ್ಬ ಕಾವ್ಯವಿಮರ್ಶಕನ ಕೈಯಲ್ಲಿ ಈ ಪದ್ಯವನ್ನು ಕೊಟ್ಟರೆ ಆತ ಏನೆಂದಾನು? ಅಲಂಕಾರ ಶಾಸ್ತ್ರದಲ್ಲಿ ಹೇಳಿದ ಯಾವ ಅಲಂಕಾರವೂ ಇಲ್ಲಿ ಇಲ್ಲ. ನವರಸಗಳಲ್ಲಿ ಯಾವೊಂದು ರಸವೂ ಇಲ್ಲ. ಭಾಷಾ ಚಮತ್ಕಾರ ವಂತು ಇಲ್ಲವೇ ಇಲ್ಲ. ಆದರಿಂದ ಇದೊಂದು ಕಾವ್ಯವೇ ಅಲ್ಲ; ಅಪ್ರಬುದ್ಧ ಕೃತಿ ಎಂದಾನು ಅಲ್ಲವೆ?

ಆದರೆ ಕಾವ್ಯ ವಿಮರ್ಶಕನಿಗೆ ಅರ್ಥವಾಗದ ವಿಷಯವೂ ಜಗತ್ತಿನಲ್ಲಿ ಉಂಟು. ದೊಡ್ಡವರ ಕೃತಿಗಳೆಂದರೆ ಕನ್ನಡಿಯಿದ್ದಂತೆ. ನಾವು ಅವುಗಳನ್ನು ನಮ್ಮೆದುರು ಹಿಡಿದುಕೊಂಡಾಗ ನಮ್ಮ ಅಪ್ರಬುದ್ಧತೆ ಆ ಕನ್ನಡಿಯಲ್ಲಿ ಪ್ರತಿಬಿಂಬಿತವಾಗುತ್ತದೆ. ಆದರೆ ನಮಗೆ ಈ ಬಿಂಬ–ಪ್ರತಿಬಿಂಬ ಭಾವ ತಿಳಿದಿರುವುದಿಲ್ಲ. ನಾವು ಆ ಕೃತಿಗಳನ್ನೇ ಅಪ್ರಬುದ್ಧ ಎಂದು ತೀರ್ಮಾನಿಸಿ ಬಿಡುತ್ತೇವೆ. ಎಂಥ ವಿಚಿತ್ರವಾದ ಭ್ರಮೆ! ಸಮಾಜದಿಂದ ಎತ್ತರಕ್ಕೆ ಏರಿದ ವ್ಯಕ್ತಿಗಳಿಗೆ ಈ ಅಪವಾದ ಒಂದು ಅನಿವಾರ್ಯವಾದ ಪ್ರಾರಬ್ಧ.

ಕಾವ್ಯ ವಿಮರ್ಶೆಯಲ್ಲಿ ಒಳಗಣ್ಣಿಗೆ ಪ್ರವೇಶವೇ ಇಲ್ಲ. ಹೊರಗಣ್ಣಿನ ಆಡಂಬರವೆ ಹೆಚ್ಚು: ಮಕ್ಕಳನ್ನು ಬೆರಗುಗೊಳಿಸುವ ಇಂದ್ರಜಾಲವೇ ಹೆಚ್ಚು. ಈ ವಿಷಯದ ಮಥನಕ್ಕಾಗಿ ಮೇಲಣ ಪದ್ಯವನ್ನೆ ತೆಗೆದು ಕೊಳ್ಳೋಣ.

ಅನುಭಾವಿ ತಾನು ಜಗತ್ತಿನ ಎಲ್ಲೆಡೆಯಲ್ಲು ದೈವೀಶಕ್ತಿಯ ವಿರಾಟ್ ರೂಪವನ್ನು ಕಾಣುತ್ತಾನೆ. ಅವನಿಗೆ ಪ್ರತಿಯೊಂದು ವಸ್ತುವಿನಲ್ಲಿಯೂ ಭಗವಂತನ ಅದ್ಭುತ ಶಕ್ತಿಯ ಆವಿಷ್ಕಾರ ಕಾಣುತ್ತದೆ: 'ಬಹು ಚಿತ್ರ—ಜಗದ್ಬಹುಧಾಕರಣಾತ್ ಪರಶಕ್ತಿಃ' ವಿಶ್ವವೆಲ್ಲ ಭಗವಂತನ ಲೀಲಾ ಸೃಷ್ಟಿ. ಅದರಿಂದ ಅದರ ನೋಟವೆ ಒಂದು ಆನಂದ. ಆ ಕಾಣ್ಕೆಯು ಆನಂದಮಯ.

ಆದರೆ ಕವಿ ಹಾಗಲ್ಲ. ಅನುಭಾವಕ್ಕೆ ಏರುವ ತನಕದ ಅವನ ಪ್ರಪಂಚದಲ್ಲಿ ರಮ್ಯ–ಅರಮ್ಯ ಎರಡೂ ಇದೆ. ಅದರಿಂದ ಅವನು ತಾನು ಕಂಡ ಒಂದು ವಸ್ತುವನ್ನು ಸವಿಯಲು ತನಗೆ ರಮ್ಯವೆನಿಸಿದ ಇನ್ನೊಂದು ಉಪಮಾನವನ್ನು ಬಯಸುತ್ತಾನೆ. ಕವಿಗೆ ಒಂದು ಹೂಬಳ್ಳಿಯನ್ನು ಕಂಡಾಗ ಮೆಚ್ಚಿಕೆಯಾಗುತ್ತದೆ. ಏಕೆ? ಅದು ಅವನು ಮೆಚ್ಚಿದ ಹರೆಯದ ಹೆಣ್ಣಿನಂತೆ ಬಳುಕುತ್ತದೆ, ಆದರಿಂದ. ಅನುಭಾವಿಗೂ ಬಳ್ಳಿಯನ್ನು ಕಂಡಾಗ ಮೆಚ್ಚಿಗೆಯಾಗುತ್ತದೆ. ಏಕೆ? ಅದು ಹೆಣ್ಣಿನಂತಿರುವುದರಿಂದಲ್ಲ. ಬಳ್ಳಿಯಂತಿರುವುದರಿಂದಲೆ. ಹೆಣ್ಣು ಭಗವಂತನ ಸೃಷ್ಟಿಯ ಒಂದು ಅದ್ಭುತ. ಬಳ್ಳಿಯೂ ಭಗವಂತನ ಸೃಷ್ಟಿಯ ಒಂದು ಅದ್ಭುತ. ಅವು ಒಂದರಂತೆ ಇನ್ನೊಂದು ಇರುವುದರಿಂದ ಸುಂದರ ಅಲ್ಲ. ಎರಡೂ ಸ್ವಯಂ ಸುಂದರ. ಒಂದಕ್ಕಿಂತ ಇನ್ನೊಂದು ವಿಲಕ್ಷಣವಾಗಿರುವುದರಿಂದಲೆ ಸುಂದರ. ಕವಿ ಮತ್ತು ಅನುಭಾವಿಗಳ ಕಾಣ್ಕೆಯ ವ್ಯತ್ಯಾಸ ಇದು. ಕವಿದೃಷ್ಟಿ ಕಲ್ಪನಾಮಯ. ಅನುಭಾವಿಯ ದೃಷ್ಟಿ ವಾಸ್ತವ. ಅದರಿಂದಲೆ ಪರಿಪಕ್ವ ಕೂಡ.

ಪುರಂದರದಾಸರದು ಇಂಥ ವಾಸ್ತವ ದೃಷ್ಟಿ. ಅವರ ಕಾಣ್ಕೆಯಲ್ಲಿ ಅವರ ಎಲ್ಲ ಆನಂದ ಅಡಗಿದೆ. ಅದರಿಂದ ಅವರು ನೇರವಾಗಿ ಹೇಳಿದರು: 'ನದಿಯ ಕಂಡೆ': ಸೂರ್ಯನ ಪ್ರಭೆಯ ಕಂಡೆ: ಮಧ್ವ ಸರೋವರ ಕಂಡೆ'.

ಶರತ್‌ಚಂದ್ರರು ಒಂದು ಮಾತು ಹೇಳಿದ್ದಾರೆ: 'ನನಗೆ ಹುಡುಗಿಯರ ತಲೆಗೂದಲು ತಲೆಗೂದಲಿನಂತೆಯೇ ಕಾಣುತ್ತದೆ. ಕಮಲಕ್ಕೆ ಮುತ್ತಿದ ತುಂಬಿವಿಂಡಿನಂತೆ ಕಾಣುವುದಿಲ್ಲ. ಕಣ್ಣು ಕಣ್ಣಿನಂತೆಯೆ ಕಾಣುತ್ತದೆ. ತಾವರೆ ಎಸಳಿನಂತೆ, ಮೀನಿನಂತೆ ಕಾಣುವುದಿಲ್ಲ. ಹುಣ್ಣಿಮೆಯ ಚಂದ್ರ ಚಂದನಂತೆಯೆ ಕಾಣುತ್ತಾನೆ. ಹರೆಯದ ಹುಡುಗಿಯ ಮೋರೆಯಂತೆ ಕಾಣುವುದಿಲ್ಲ. ನಾನೇನು ಮಾಡಲಿ? ನಾನು ಕವಿಯಲ್ಲ. ನನಗೆ ಇದ್ದದ್ದು ಇದ್ದ

ಹಾಗೆಯೆ ಕಾಣುತ್ತದೆ'. ಇದೇನೂ ಸಣ್ಣತನವಲ್ಲ. ಈ ರೀತಿಯ ದೃಷ್ಟಿ ಸಾಧಿಸಬೇಕಾದರೆ ಪುಣ್ಯ ಮಾಡಬೇಕು. ಪುರಂದರದಾಸರು ಇಂಥ ದೃಷ್ಟಿ ಪಡೆದವರು. ಆದರಿಂದಲೆ ಅವರು ಇಂಥ ಹಾಡು ಬರೆಯುವುದು ಸಾಧ್ಯ ವಾಯಿತು.

ಸರಿ. ಇನ್ನು ಮುಂದೆ ಸಾಗೋಣ. ಪರಿಸರವನ್ನೆಲ್ಲ ಕಂಡ ಮೇಲೆ ಕೊನೆಯ ಪದ್ಯದಲ್ಲಿ ಕೃಷ್ಣನ ಕಂಡೆ ಎನ್ನುತ್ತಾರೆ. ಅವರು ಕಂಡ ಕೃಷ. ಎಂಥವನು?

ಉಂಗುರ ಉಡಿದಾರ ಉಡಿಘಂಟೆ ನಾ ಕಂಡೆ
ರಂಗಮಾಣಿಕದ ನವರತ್ನ ಮಾಲೆ ಕಂಡೆ
ಧಿಂ ಧಿಂ ಧಿಮಿಕೆಂದು ಕುಣಿವ ಕೃಷ್ಣನ ಕಂಡೆ

ಉಡುಪಿಗೆ ಸಾವಿರಾರು ಯಾತ್ರಿಕರು ಬಂದಿದ್ದಾರೆ: ಬರುತ್ತಿದ್ದಾರೆ. ಯಾರಾದರೂ ಇಂಥ ಕೃಷ್ಣನನ್ನು ಕಂಡಿದ್ದಾರೇನು? ಯಾರ ಮುಂದಾದರೂ ಕೃಷ್ಣ ಧಿಂ ಧಿಮಿ ಧಿಮಿಕೆಂದು ಕುಣಿದಿದ್ದಾನೇನು? ವೇಣುಗೋಪಾಲನನ್ನು ಹಾಡಿ ಕುಣಿಸಿದ ವ್ಯಾಸರಾಯರ ಶಿಷ್ಯ ಮಾತ್ರ ಉಡುಪಿಯ ಕೃಷ್ಣನ ನಾಟ್ಯವನ್ನು ಕಂಡರು. ಅದನ್ನು ನೋಡುವ ಬಗೆಯೆ ಬೇರೆ. ಅರ್ಜುನನಿಗೆ ಕೃಷ್ಣ ತನ್ನ ರೂಪವನ್ನು ತೋರಿಸುವ ಮುನ್ನ 'ದಿವ್ಯಂ ದದಾಮಿ ತೇ ಚಕ್ಷುಃ' ಎಂದು ಈ ಒಳಗಣ್ಣು, ಈ ದಿವ್ಯ ಚಕ್ಷಸ್ಸು ಪುರಂದರದಾಸರಿಗೆ ಹರಿಯ ನಾಟ್ಯವನ್ನು ತೋರಿಸಿತು. ಆದರಿಂದಲೆ ಅವರು ಹೇಳಿದರು: 'ಹರಿಯ ಒಳಗಣ್ಣಿನೊಳ ಗಿಂದ ನೋಡೋ'

ಪುರಂದರದಾಸರ ಈ ಯೋಗಸಿದ್ಧಿಯನ್ನು ತಿಳಿದವರು ಕಮ್ಮಿ. ಅವರು ಒಬ್ಬ ಭಗವದ್ಭಕ್ತರಾದ ತಂಬೂರಿ ದಾಸ ಎಂದೇ ಜನ ನಂಬಿಕೊಂಡು ಬಂದಂತಿದೆ. ಆದರೆ ಅವರು ದೊಡ್ಡ ಯೋಗಸಿದ್ಧರೂ ಹೌದು. ಯೋಗದ ಸಾಧನೆಯಿಂದ ಕುಂಡಲಿಯನ್ನು ಜಾಗೃತಗೊಳಿಸಿ, ಷಟ್ಚಕ್ರಗಳನ್ನು ಶೋಧಿಸಿ, ಹೃದಯದಲ್ಲಿ ಭಗವಂತನ ದರ್ಶನ ಪಡೆದ ಯೌಗಿಕ ಅನುಭವಗಳನ್ನು ಅವರು ಹಲವು ಹಾಡುಗಳಲ್ಲಿ ಬರೆದಿಟ್ಟಿದ್ದಾರೆ. ಅವುಗಳಲ್ಲಿ ಮುಖ್ಯವಾದವು ಎರಡು:

ಕಣ್ಣಿನೊಳಗೆ ನೋಡೋ ಹರಿಯ
ಒಳಗಣ್ಣಿನೊಳಗಿಂದ ನೋಡೊ ಮೂಜಗದೊಡೆಯನ
ಆಧಾರ ಮೊದಲಾದ ಆರು—ಚಕ್ರ
ಶೋಧಿಸಿ ಬಿಡಬೇಕು ಈಷಣ ಮೂರು
ಸಾಧಿಸಿ ಸುಷುಮ್ನಾ ಏರು—ಅಲ್ಲಿ
ಭೇದಿಸಿ ನೀ ಪರಬ್ರಹ್ಮನ ಸೇರು

ಎವೆ ಹಾಕದೆ ಮೇಲೆ ನೋಡಿ—ಬೇಗ
ಪವನದಿಂದಲಿ ವಾಯು ಬಂಧನ ಮಾಡಿ
ನವಿದು ನಾದವ ಪಾನ ಮಾಡಿ—ಅಲ್ಲಿ
ನವವಿಧ ಭಕ್ತಿಲಿ ನಲಿನಲಿದಾಡಿ
ಕಣ್ಣಿನೊಳಗೆ ನೋಡೋ ಹರಿಯ

ಅಂಡಜದೊಳಾಡುತಾನೆ—ಭಾನು
ಮಂಡಲದೊಳು ನಾರಾಯಣನೆಂಬುವನೆ
ಕುಂಡಲಿ ತುದಿಯೊಳಿದ್ದಾನೆ—ಶ್ರೀಪು-
ರಂದರವಿಟ್ಠಲ ಪಾಲಿಸುತಾನೆ

*  *  *

ನಳಿನನಾಭನ ನೀನು ಪಾಡೊ ಬೇಗ
ಒಳಗಣ್ಣಿನಿಂದ ಅವನ ಕಂಡು ನಲಿದಾಡೊ

ಹೃದಯ ಆಕಾಶದಲ್ಲಿರುವ ಅಲ್ಲಿ
ಪದುಮಾಕ್ಷ ಪುರುಷೋತ್ತಮನೆಂಬಾತ
ಆತನು ಬಹುರೂಪದಿಂದ ಕಾವ
ಆಧಾರವಾಗಿಪ್ಪ ಸೂಕ್ಷ್ಮಪ್ರದೇಶ

ಎಂಟೊಂದು ಕದಗಳ ಮುಚ್ಚೀ ಮೇಲೆ
ತಂಟೆಯಿಲ್ಲದ ಮನವ ಅವನಲಿ ಇರಿಸೊ
ಕುಂಡಲಿ ಮಧ್ಯದಿ ನೋಡೊ ದಿವ್ಯ
ಮಂಟಪದಲ್ಲಿ ಜ್ಯೋತಿ ಥಳಥಳಿಸುವದೊ

ಥಳಥಳಿಸುವ ಬಾಲಕೃಷ್ಣ ಅಲ್ಲಿ
ಬಲು ಕ್ರೀಡೆಗಳನ್ನೆಲ್ಲ ಮಾಡಿಸುವನಯ್ಯ

ಒಳಗೆ ಹೊರಗೆ ಪರಿಪೂರ್ಣ ನಮ್ಮ
ಫುಲ್ಲಲೋಚನ ತಂದೆ ಪುರಂದರವಿಠಲ.

ಈ ಪದ್ಯದಲ್ಲಿ ಬಂದ ಯೌಗಿಕ ಅನುಭೂತಿಗಳ ವಿವರಣೆ ಸದ್ಯ ಅಪ್ರಸ್ತುತ. ಆಚಾರ್ಯ ಮಧ್ವರು ಈ ಚಕ್ರ ಶೋಧನೆ ಮತ್ತು ರೂಪ ಸಾಕ್ಷಾತ್ಕಾರದ ಬಗೆಗೆ ತಂತ್ರಸಾರದಲ್ಲಿ ಸೂಚನೆಯಿತ್ತಿದ್ದಾರೆ. 'ಓಂ ತತ್‌ಸತ್ ಪ್ರಣವಕಲ್ಪ' ದಲ್ಲಿ ಹೃದಯ ಕಮಲದಲ್ಲಿ ಉಪಾಸನೆ ಮಾಡುವ ಬಗೆಯನ್ನು ವಿವರಿಸಿದ್ದಾರೆ. ಈ ಹಾಡುಗಳು ಆ ದಾರಿಯಲ್ಲಿ ನಡೆದ ಸಾಧಕನೊಬ್ಬನ ಸಿದ್ಧಿಯ ಸಂಕೇತಗಳು.

ಯೋಗಾಭ್ಯಾಸದ ಬಗೆಗೆ ಇನ್ನೂ ಹಲವು ಹಾಡುಗಳು ಉಪಲಬ್ಧವಿವೆ. 'ಬ್ರಾಹ್ಮಣನೆಂದರೆ ಬ್ರಹ್ಮನ ತಿಳಿದವನು', ಮುಂತಾದ ಪದ್ಯಗಳೆಲ್ಲ ಈ ಮಾನಸ ಸಾಕ್ಷಾತ್ಕಾರದ ವಿವರಗಳನ್ನೇ ಹೇಳುವಂಥವು. ಆದರೆ ಇಂಥ ಮಾತುಗಳನ್ನು ಅರ್ಥಮಾಡಿಕೊಳ್ಳುವುದನ್ನೂ ನಾವು ಮರೆತಿದ್ದೇವೆ. ಇದರ ಮರ್ಮ ತಿಳಿಯಬೇಕಾದರೆ ದಾಸರು ಹೇಳಿದಂತೆ, 'ಇರಬೇಕು; ಇರದಿರಬೇಕು'. ಆದರೆ ನಮಗೆ ನಮ್ಮ ಅಜ್ಞಾನವೆ ಹಾಸಲುಂಟು; ಹೊದೆಯಲುಂಟು. ಇದನ್ನೆಲ್ಲ ತಿಳಿಯಲು ಪುರುಸೊತ್ತು ಯಾರಿಗೆ ಉಂಟು? ನಮಗಿಂತ ದೊಡ್ಡ ಹೊರೆಯನ್ನು ನಾವು ತಲೆಯಲ್ಲಿ ಹೊತ್ತು ತಿರುಗಾಡುತ್ತಿದ್ದೇವೆ. 'ಮೂಗು ಸಣ್ಣದು: ಮೂಗುತಿ ದೊಡ್ಡದು; ಭಾರ ಹೊರುವವರು ಯಾರು?' ಹೀಗಾಗಿದೆ ಇಂದಿನ ಸ್ಥಿತಿ. ಹರಿ ಕರುಣ – ಗುರುಕರುಣಗಳ ಜತೆಯಾದಾಗ ಮಾತ್ರ ಮತ್ತೆ ಆ ಶಕ್ತಿಯ ಆವಿಷ್ಕಾರ ಸಾಧ್ಯವಾದೀತು: ಆಗ ಮಾತ್ರ ಅಂತರಂಗದ ಕದ ತೆರೆದೀತು.



ಮುಂದೊಲಿದು ಪೊಳೆವ | ದೀಪ್ತ ಮೂರುತಿ ನಮ್ಮ ವಿಜಯ ವಿಠಲ ತನ್ನಮಾಹಾತ್ಮ್ಯದಿಂತೆ ಪೊಳೆದು ಅಜ್ಞಾನಾಂಧ ಓಡಿಸುವ || ೧ ||

ಮಟ್ಟತಾಳ

ತ್ವಕ್ಚರ್ಮ ಮಾಂಸ ಮಜ್ಜ ಮೇಧಸ್ಸು ಅಸ್ಥಿ | ರಕುತ ಸಮೇತ ಸಪ್ತ ಧಾತುಗಳು || ಯುಕ್ತಿವಂತರು ಮನಃ ಪೂರ್ವಕದಿಂದ | ಉಕ್ತಿ ತಿಳಿದು ಹರಿಯ ಕೊಂಡಾಡುವರು | ಭಕುತಿಯಿಂದಲಿ ಒಮ್ಮೆ ಸ್ಮರಣಮಾಡೇ | ಮುಕುತಿಗೆ ಇದೇ ಮಾರ್ಗ ಅನ್ಯ ಯೋಚನೆ ಸಲ್ಲ | ಕಕುಲಾತಿಯಿಂದ ಅನ್ಯ ಗ್ರಂಥವನೋದಿ | ಕಕ್ಕಸ ಯಾತನೆಯ ಒಳಗಾಗುವದಲ್ಲ | ನಖ ಶಿಖ ಪರ್ಯಂತ ಗುಣಿಸಿ ಎಣಿಸುವದು | ಸುಖ ತೀರ್ಥರ ಮತದ ಮನುಜರ ನೆರೆನಂಬಿ | ಸುಖಪೂರ್ಣ ನಿತ್ಯ ವಿಜಯ ವಿಠಲರೇಯನ | ಭಕುತರೊಳಗೆ ನಲಿದು ಭವ ಉತ್ತರಿಸುವದು || ೨ ||

ರೂಪಕತಾಳ

ತನುರೂಪಹದಲ್ಲಿ ಹಿಂಕಾರ ಪದ್ಮ್ಯವನ್ನು | ನನು ಕಾಣೋ ತ್ವಕ್ಕಿನಲ್ಲಿ ಪ್ರಸ್ತಾವನಾಮಕ | ಅನಿರುದ್ಧ ರಾಮನು ಚರ್ಮದಿ ಸಂಕರು | ಷಣನೆಂಬ ಪ್ರತಿಹಾರ ನಾಮಕ ಶ್ರೀಪತಿ | ಗುಣನಿಧಿ ಉದ್ಗೀಥ ನಾಮಕ ವಾಸುದೇ | ವನು ಪರಾಹಾಮೂರ್ತಿಗಳು ಮಾಂಸದಲ್ಲಿ ಉಂಟು | ನೆನಿಸು ಶಾಂತಿ ಸಂಪಿದ ನಿಧನ ನಾಮಕ ನಾರಾ | ಯಣ ವ್ವಯು ರೂಪಗಳು ಶೋಣಿತದಲಿ ವಾಸ | ಪ್ರಣವ ಪ್ರತಿಪಾದ್ಯ ವಷಟ್ಕಾರನಾಮಕನು ಷ | ಡ್ಗುಣನೆಂಬೊ ಎರಡನ್ನು ಮೇದಸ್ಸಿನಲ್ಲಿ ತಿಳಿ | ಘನಶ್ಲೋಕ ಹರ ಸಾರನೆಂಬೊದಾದಿ ನಾರಾಯಣ ಮೂರ್ತಿ ಇಪ್ಪರು ಮಜ್ಜದಲ್ಲಿ ಬಿಡದೆ ಜನನರಹಿತ ಹಂಸನಾಮಕ ಉಪೇಂ | ದ್ರನು ಪೊಳೆವ ಅಸ್ಥಿಗಳೊಗಿಪ್ಪ ತಪ್ಪದೆ ಮನೋನಿಯಾಮಕನೊಡೆಯ ವಿಜಯ ವಿಠಲರೇಯ | ಅಣುರೇಣು ತೃಣಕಾಷ್ಟ ಬಹಿರಂತರ ಭರಿತ || ೩ ||

ಝಂಪೆತಾಳ

ಪೇಳಲೇನು ಮುಂದೆ ಅಸ್ಥಿ ಮಜ್ಜದಲ್ಲಿ ಅಂ | ಗುಲಿ ಪರ್ವಗಳಲ್ಲಿ ಸಾವಿರದ ಎಂಭತ್ತು | ಮೇಲು ಭಗವದ್ರೂಪ ಮೂರುಕಡೆ ಇಪ್ಪದು ಹೋಲಿಕೆಯ ಬಲ್ಲವರಾರು ಬುಧರು | ಏಳು ಧಾತುಗಳೊಳಗನ್ನಮಯಾದಿಕೋಶ | ಮೇಲು ಕೆಳಗೆ ಕವಚವಂದದಿ | ಪಾಲಿಸುವಕ್ಕು ಅದರೊಳಗೆ ತನ್ನಾಮಕ | ಶ್ರೀಲೋಲನಿಪ್ಪನು ಅಯಿದುರೂಪಾ | ವಿಳಲವಮಾಡದೆಸೂಕ್ಷ್ಮ ಸೃಷ್ಟಿಯಲ್ಲಿ | ನಾಲ್ಕು ಮೂರ್ತಿಗಳು ಅನಿರುದ್ಧಾದಿ | ಅ ಲಿಂಗ ದೇಹಕ್ಕೆ ಅಪರಕವಾಗಿಪವು | ಅಲಿಸಿದರೆ ಅಂಗಿತೊಟ್ಟ ತೆರದಿ | ಪಾಲಿಸುವ ಪ್ರತಿದಿನ ವಿಜಯ ವಿಠಲರೇಯನ | ಊಳಿಗವನು ಮಾಡೆ ಉದ್ಧಾರನಾಗುವಾ || ೪ ||

ತ್ರಿವಿಡಿತಾಳ

ಹದಿನಾರು ಕೂಡಿದ ಅನಾದಿ ಲಿಂಗದೇಹ | ಇದು ಉಂಟು ಕವಚೆಂದದಿ